# Stories for Young Children

C. H. C. Benares.

(*Translated by*)

**K. MADHAVA ROW.**

# ಆರ್ಯಬಾಲನೀತಿ

೧ ನೇ ಭಾಗ.

ಪರಿವರ್ತಕ

ಕೆ. ಮಾಧವರಾವ್.

ಹೆಡ್ಮಾಸ್ಟರ್ ಎ. ವಿ. ಸ್ಕೂಲ್,

ಗುಂಡ್ಲುಪೇಟೆ.

**MYSORE:**
**PRINTED AT THE CROWN PRESS,**
**1911.**



**Price 4 Annas]** [ಕ್ರಯ ೪ ಆಣೆ

Stories for Young children

## ಪ್ರಸ್ತಾವನೆ.

ಮಿತ್ರರೇ:—

ದೇಶೀಯ ಪಾಠಶಾಲೆಗಳಲ್ಲಿ ಮತ ಮತ್ತು ನೀತಿಬೋಧನೆಗಳನ್ನು ಮಾಡಬೇಕೆಂದು ಸರ್ಕಾರದವರು ವಿಧಿಸಿರುವುದು ಸರಿಯಷ್ಟೆ. ಕನ್ನಡ II, III, IV ನೇ ತರಗತಿಗಳಲ್ಲಿ ಮತ ಮತ್ತು ನೀತಿಬೋಧನೆಯನ್ನು ಮಾಡಲು ತಕ್ಕ ಪುಸ್ತಕಗಳು ಇಲ್ಲದ್ದರಿಂದ ಈ ಕೊರತೆಯನ್ನು ತಪ್ಪಿಸುವುದಕ್ಕೋಸ್ಕರ ಕಾಶಿಯಲ್ಲಿರುವ ಸೆಂಟ್ರಲ್ ಹಿಂದೂಕಾಲೇಜಿನವರಿಂದ ಆಂಗ್ಲಭಾಷೆಯಲ್ಲಿ ರಚಿತವಾದ ಮತ್ತು ನಮ್ಮ ಮೈಸೂರು ವಿದ್ಯಾಭ್ಯಾಸದ ಇಲಾಖೆಯವರಿಂದ ನೀತಿಬೋಧೆಗಾಗಿ ಅಂಗೀಕರಿಸಲ್ಪಟ್ಟಿರುವ "Stories for Young Children from Hindu Sacred Books" "ಮಕ್ಕಳಿಗೋಸ್ಕರ ಪುರಾತನಗ್ರಂಥಗಳಿಂದ ಸಂಗ್ರಹಿಸಿದ ಕಥೆಗಳು" ಎಂಬ ಪುಸ್ತಕವನ್ನು ಕನ್ನಡ ಭಾಷೆಗೆ ಪರಿವರ್ತಿಸಿ "ಆರ್ಯಬಾಲನೀತಿ" ಎಂಬ ಹೆಸರಿನಿಂದ 2 ಭಾಗಗಳಾಗಿ ಪ್ರಿಂಟು ಮಾಡಿಸಿರುವೆನು. ಮತಾಭಿಮಾನಿಗಳೆಲ್ಲರೂ ಇದನ್ನು ಪರಿಗ್ರಹಿಸಿ ನನ್ನ ಉದ್ದೇಶವನ್ನೂ, ಶ್ರಮವನ್ನೂ, ಸಾರ್ಥಕಪಡಿಸಬೇಕಾಗಿ ಕೋರುತ್ತೇನೆ. ಇದರಲ್ಲಿ ದೋಷಗಳೇನಾದರೂ ಇದ್ದರೆ ಕ್ಷಮಿಸಿ ಗುಣಗ್ರಹಣಮಾಡಬೇಕೆಂಬುದೇ ನನ್ನ ವಿಜ್ಞಾಪನೆ.

ಈ ಗ್ರಂಥವನ್ನು ಬರೆವುದರಲ್ಲಿ ನನಗೆ ಪದ್ಯಭಾಗಗಳನ್ನು ಮಾಡಿಕೊಟ್ಟು ಭಾಷಾಶೈಲಿಯನ್ನು ಕ್ರಮಪಡಿಸಿದ ಮ|| ರಾ|| ಕನ್ನಡಪಂಡಿತ ತಿಮ್ಮಣ್ಣಯ್ಯನವರಿಗೂ, ಮತ್ತು ಕೆಲವು ನ್ಯೂನತೆಗಳನ್ನು ತೋರಿಸಿ ಸಲಹೆಕೊಟ್ಟ ಮಹಾರಾಜರವರ ಕಾಲೇಜ್ ಅ|| ಮಾ|| ಮ|| ರಾ|| ಎ|| ವೆಂಕಟೇಶಯ್ಯನವರಿಗೂ, ನನ್ನ ವಂದನೆಗಳನ್ನು ಸಮರ್ಪಿಸುವೆನು.

ಈ ಪುಸ್ತಕದಿಂದ ಉತ್ಪತ್ತಿಯಾಗುವ ಪ್ರತಿರೂಪಾಯಿಗೂ ನಾಲ್ಕಾಣೆಯಂತೆ ಕಾಶಿಯ ಸೆಂಟ್ರಲ್ ಹಿಂದೂಕಾಲೇಜಿಗೆ ಕೊಡಲ್ಪಡುವುದು.

ಸಜ್ಜನಸೇವಕ,
ಕೆ. ಮಾಧವರಾವ್

## ಅನುಕ್ರಮಣಿಕೆ.

16. ೮. 49.

॥ ಓಂ ॥

ಆಚಾರಲಕ್ಷಣೋಧರ್ಮಃ ಸಂತಸ್ತ್ವಾಚಾರಲಕ್ಷಣಾಃ ॥
ಆಗಮಾನಾಂಹಿ ಸರ್ವೇಷಾಮಾಚಾರಃ ಶ್ರೇಷ್ಠ ಉಚ್ಯತೇ ॥
ಆಚಾರ ಪ್ರಭವೋಧರ್ಮೋಧರ್ಮಾ ದಾಯುರ್ವಿವರ್ಧತೇ ॥
ಆಚಾರಾಲ್ಲಭತೇ ಹ್ಯಾಯುರಾಚಾರಾಲ್ಲಭತೆ ಶ್ರಿಯಂ ॥
ಆಚಾರಾತ್ಕೀರ್ತಿಮಾಪ್ನೋತಿ ಪುರುಷಃ ಪ್ರೇತ್ಯಚೇಹಚ ॥

(ಮಹಾಭಾರತ ಅನುಶಾಸನಿಕಪರ್ವ C. IV)

ಮಕ್ಕಳಿರಾ,

ಈ ಪುಟದ ಮೇಲ್ಭಾಗದಲ್ಲಿ ಬರೆದಿರುವ ಶಬ್ದಗಳನ್ನು ನೀವು ಓದಿ ತಿಳಿದುಕೊಳ್ಳಲಾರಿರಿ. ಏಕೆಂದರೆ, ಅವು ಸಂಸ್ಕೃತ ಶಬ್ದಗಳು. ನಿಮಗೆ ಸಂಸ್ಕೃತವು ತಿಳಿಯದು. ಸ್ವಲ್ಪ ವಯಸ್ಸಾದ ಮೇಲೆ ಪ್ರಾಯಶಃ ನೀವು ಅದನ್ನು ಕಲಿಯ ಬಹುದು. ಪ್ರತಿಯೊಬ್ಬ ಹಿಂದೂ ಬಾಲಕ ಬಾಲಕಿಯರಿಗೂ ಸಂಸ್ಕೃತವು ಸ್ವಲ್ಪವಾದರೂ ಗೊತ್ತಿರಬೇಕು. ಏಕೆಂದರೆ, ಪವಿತ್ರವಾದ ನಿಮ್ಮ ಗ್ರಂಥಗಳು ಈ ಭಾಷೆಯಲ್ಲಿ ಬರೆಯಲ್ಪಟ್ಟಿವೆ. ಪೂರ್ವದಲ್ಲಿದ್ದ ಪರಿಶುದ್ಧರಾದ ಋಷಿಗಳು ಈ ಭಾಷೆಯಲ್ಲಿಯೇ ಮಾತನಾಡುತ್ತಿದ್ದರು. ನೀವು ಈ ಶಬ್ದಗಳನ್ನು ಓದಿ ಅರ್ಥವನ್ನು ತಿಳಿದುಕೊಳ್ಳಲು ಶಕ್ತರಾಗಿಲ್ಲ. ಆದ್ದರಿಂದ, ಈ ಪುಸ್ತಕದಲ್ಲಿ ಅವುಗಳ ಅರ್ಥವನ್ನು ನಿಮಗೆ ಹೇಳುವೆನು.

ನಾವು ದೇವರ ಸೇವೆಯನ್ನು ಮಾಡಬೇಕಾದರೆ ನಮ್ಮ ನಡತೆಯು ಒಳ್ಳೆಯದಾಗಿರಬೇಕು. ಇದನ್ನೇ ಈ ಶಬ್ದಗಳು ನಿಮಗೆ ತಿಳಿಸುತ್ತವೆ.

ಸದಾಚಾರವೆ ಅತ್ಯುತ್ತಮವಾದುದು. ಸದಾಚಾರವೆ ಧರ್ಮ, ಧರ್ಮವೆ ಮತ. ಯಾವ ಆಚಾರವು ನಮ್ಮ ಜೀವಮಾನಕ್ಕೆ ಅಲಂಕಾರಪ್ರಾಯವಾಗಿರುವುದೋ ಅದೇ ಮತ; ಅದೇ ಧರ್ಮ. ಸದಾಚಾರದಿಂದಲೆ ನಾವು ಬದುಕುತ್ತೇವೆ. ಸೌಖ್ಯವನ್ನು ಹೊಂದುತ್ತೇವೆ. ಮತ್ತು ಇದರಿಂದ ನಮಗೆ ಇಹಪರ ಲೋಕಗಳಲ್ಲಿ ಉತ್ತಮ ಸ್ಥಿತಿಯು ಲಭಿಸುತ್ತದೆ.

ನಾನು ನಿಮಗೆ ಹೇಳಬೇಕೆಂದಿರುವ ಸದಾಚಾರವು ಇದಕ್ಕಾಗಿಯೇ ಆಗಿರುವುದು. ಲೋಕದಲ್ಲಿ ಸುಖವನ್ನುಂಟುಮಾಡುವವಸ್ತುಗಳು ಕೆಲವು. ದುಃಖವನ್ನುಂಟುಮಾಡುವವು ಕೆಲವು ಎಂಬುದು ನಿಮಗೆ ತಿಳಿದೇ ಇರುವುದು. ಕೆಲವುವೇಳೆ ನೀವು ಕೋಪದಿಂದಿರುತ್ತೀರಿ. ಇನ್ನು ಕೆಲವುವೇಳೆ ನೀವು ಹೇಳಿದಂತೆ ಕೇಳುವುದಿಲ್ಲ. ಆದರೆ ನಿಮ್ಮಲ್ಲಿ ಅನೇಕರು ಒಳ್ಳೆಯವರಾಗಿರುವುದಕ್ಕೆ ಪ್ರಯತ್ನ ಪಡುತ್ತೀರೆಂದು ನಂಬಿರುವೆನು.

ಈಗ ನೀವು ಕೋಪಿಷ್ಟರಾಗಿದ್ದರೆ ಆಮೇಲೆ ನೀವೇ ದುಃಖಪಡುತ್ತೀರಿ. ಶಾಂತಸ್ವಭಾವವುಳ್ಳವರಾಗಿದ್ದಿದ್ದರೆ ಚನ್ನಾಗಿತ್ತೆಂದು ಯೋಚಿಸುವಿರಿ. ಮತ್ತು ವಿಧೇಯರಾಗಿಲ್ಲದೆ ಇದ್ದುದಕ್ಕಾಗಿ ಆಗಾಗ್ಗೆ ವ್ಯಸನಪಡುತ್ತೀರಿ.

ಸದ್ಧರ್ಮದ ವಿಷಯವಾಗಿ ನಾನು ನಿಮಗೆ ಕೆಲವು ಕಥೆಗಳನ್ನು ಹೇಳುವೆನು. ಈ ಕಥೆಗಳು ನಿಮ್ಮ ಕರ್ತವ್ಯಗಳನ್ನು, ಅಂದರೆ, ನೀವು ಮಾಡಬೇಕಾದುದನ್ನು ತಿಳಿಸುವುವು. ಆದ್ದರಿಂದ ನೀವೂ ಸದ್ಗುಣವುಳ್ಳವರಾಗಿರುವುದಕ್ಕೆ ಇವು ಸಹಾಯ ಮಾಡುವುವು. ಈ ಕಥೆಗಳು ನಿಮ್ಮ ಪವಿತ್ರವಾದ ಗ್ರಂಥಗಳಲ್ಲಿ ಸಿಕ್ಕುವುವು.

ನೀವು ಚಿಕ್ಕಮಕ್ಕಳು. ಈ ಕಥೆಗಳನ್ನು ಓದುವುದು ನಿಮಗೆ ಸುಲಭವಲ್ಲ. ಇವುಗಳಲ್ಲಿ ಕಠಿಣವಾದ ಶಬ್ದಗಳು ಉಪಯೋಗಿಸಲ್ಪಟ್ಟಿವೆ. ನಾನು ಅವುಗಳನ್ನು ಸುಲಭವಾದ ಮಾತುಗಳಲ್ಲಿ ಬರೆದರೆ ನೀವು

ಅವುಗಳನ್ನು ಮತ್ತೆ ಮತ್ತೆ ಓದಿಕೊಳ್ಳಬಹುದು. ಬಹಳಕಾಲದ ಹಿಂದೆ ಸತ್ಪುರುಷರು ಮತ್ತು ಸದಾಚಾರವುಳ್ಳ ಸ್ತ್ರೀಯರು ಹೇಗೆ ನಡೆಯುತ್ತಿದ್ದರೆಂಬುದನ್ನು ಈ ಕಥೆಗಳು ಹೇಳುತ್ತವೆ. ಅವು ಚಿಕ್ಕಮಕ್ಕಳ ಒಳ್ಳೆಯ ನಡತೆಗಳನ್ನೂ, ಅವರು ಯಾವ ರೀತಿ ಎಲ್ಲರಿಗೂ ವಿಧೇಯರಾಗಿದ್ದರೆಂಬುದನ್ನೂ, ಪರಮೇಶ್ವರನನ್ನೂ, ಶ್ರೀ ಕೃಷ್ಣನನ್ನೂ, ಮಹಾತ್ಮರಾದ ದೇವತೆಗಳನ್ನೂ, ಎಷ್ಟು ಪ್ರೀತಿಸುತ್ತಿದ್ದರೆಂಬುದನ್ನೂ, ಮತ್ತು ದೇವತೆಗಳು ತಮಗೆ ಹೇಳಿದ ನಿಯಮಗಳನ್ನು ಹೇಗೆ ನಡೆಸುತ್ತಿದ್ದರೆಂಬುದನ್ನೂ ನಿಮಗೆ ತಿಳಿಸುತ್ತವೆ. ಅವರ ಸದಾಚಾರಗಳ ವಿಷಯಗಳನ್ನು ಓದುವುದರಿಂದ ನಾವೂ ಸಹ ಯಾವ ರೀತಿ ಸಜ್ಜನರಾಗಬಹುದೆಂಬುದನ್ನು ತಿಳಿದುಕೊಂಡು ಅದರಂತೆ ನಡೆಯಬಹುದು.

ಈ ಸುಂದರವಾದ ಪ್ರಪಂಚವನ್ನೂ, ಪ್ರಕಾಶಮಾನನಾದ ಸೂರ್ಯನನ್ನೂ, ತಂಪಾದ ನೆರಳನ್ನು ಕೊಡುವ ಮರಗಳನ್ನೂ, ಪಕ್ವವಾದ ಹಣ್ಣುಗಳನ್ನೂ, ನಾವು ತಿನ್ನುವ ಧಾನ್ಯಗಳನ್ನೂ, ನಮ್ಮ ಸೇವೆಮಾಡುವ ಪ್ರಾಣಿಗಳನ್ನೂ, ನಮಗೆ ಸೊಗಸಾದ, ಮಧುರವಾದ ಹಾಲನ್ನು ಕೊಡುವ ಸಾಧುವಾದ ಹಸುವನ್ನೂ ನೋಡಿರಿ. ಈ ವಸ್ತುಗಳೆಲ್ಲವೂ ದೇವತೆಗಳು ನಮಗೆ ಕೊಟ್ಟಿರುವ ಭಾಗ್ಯವು. ಅವರು ನಮಗೆ ಇಷ್ಟನ್ನು ಕೊಟ್ಟಿರುವಾಗ್ಗೆ ನಾವು ಅವರಿಗೆ ಪ್ರತಿಯಾಗಿ ಏನನ್ನಾದರೂ ಮಾಡಬೇಕಲ್ಲವೆ? ನಾವು ಏನನ್ನು ಮಾಡಬಲ್ಲೆವು? ಅವರು ಎಲ್ಲಾ ಪದಾರ್ಥಗಳನ್ನೂ ಹೊಂದಿರುವರು. ಆದರೂ ನಾವು ಯಾವುದನ್ನಾದರೂ ಕೊಡಬಹುದು. ನಾವು ಅವರಿಗೆ ಸತ್ಕ್ರಿಯೆಗಳನ್ನೂ, ಸದ್ಭಾವಗಳನ್ನೂ, ಸದ್ವಾಕ್ಕುಗಳನ್ನೂ, ಕೊಡಬಹುದು.

ಇವುಗಳೆ "ಸದ್ಗುಣಗಳು" "ನಮಗೂ ಇತರರಿಗೂ ಸುಖವನ್ನುಂಟುಮಾಡತಕ್ಕ ಒಳ್ಳೆಯ ನಡತೆ'' ಎಂಬುದೆ ಇದರ ಅರ್ಥವು.

ಸತ್ಕಾರ್ಯಗಳಲ್ಲಿ ಅನೇಕ ಬಗೆಯುಂಟು. ನಿಮಗಿಂತ ಚಿಕ್ಕವರಾಗಿರುವವರಿಗೂ, ನಿಮಗಿಂತಲೂ ಬಲಹೀನರಾಗಿರುವವರಿಗೂ, ಮತ್ತು ನಿಮ್ಮಷ್ಟು ವಯಸ್ಸಾಗದೆ ಇರುವ ಚಿಕ್ಕಸ್ನೇಹಿತರಿಗೂ, ಮಾಡಬೇಕಾದ ಸತ್ಕಾರ್ಯಗಳು ಕೆಲವು; ಬಡವರಾಗಿರುವವರಿಗೂ, ನಿಮ್ಮಷ್ಟು ತಿಳುವಳಿಕೆ ಇಲ್ಲದವರಿಗೂ, ನೀವು ಮಾಡಬಹುದಾದುದು ಕೆಲವು; ನಿಮ್ಮ ತಂದೆತಾಯಿಗಳಿಗೂ, ನಿಮ್ಮ ಗುರುಗಳಿಗೂ, ಹಿರಿಯರಿಗೂ ಮತ್ತು ರಾಜನಿಗೂ ಸಹ ಮಾಡತಕ್ಕ ಸತ್ಕಾರ್ಯಗಳು ಕೆಲವು.

ಅನಂತರ ನಾವು ಇನ್ನೂ ಹೆಚ್ಚಾಗಿ ಸತ್ಯವಂತರಾಗಿಯೂ, ವಿಧೇಯತೆಯುಳ್ಳವರಾಗಿಯೂ, ಸಾಧುಗಳಾಗಿಯೂ, ಸ್ವಾರ್ಥಪರತೆಯಿಲ್ಲದವರಾಗಿಯೂ, ಆಗುವುದಕ್ಕೋಸ್ಕರ ನಮಗೆ ನಾವು ಮಾಡಿಕೊಳ್ಳಬೇಕಾದ ಸತ್ಕಾರ್ಯಗಳೂ ಇವೆ. ನಾವು ಯಾವ ಪ್ರಾಣಿಯನ್ನಾದರೂ ಎಂದಿಗೂ ನೋಯಿಸದೆ ಇರುವುದಕ್ಕೂ, ನಿಜವಲ್ಲದುದನ್ನು ಎಂದಿಗೂ ಹೇಳದಿರುವುದಕ್ಕೂ, ನಾವು ಪ್ರಯತ್ನಿಸಬಹುದು. ನಮಗೆ ನಾವು ಮಾಡಿಕೊಳ್ಳುವುದಕ್ಕೆ ಪ್ರಯತ್ನಪಡಬೇಕಾದ ಸತ್ಕಾರ್ಯಗಳು ಇವೇ ಆಗಿರುತ್ತವೆ. ಅನಂತರದಲ್ಲಿ ದೇವರ ವಿಷಯದಲ್ಲಿ ನಾವು ನಡೆದುಕೊಳ್ಳಬೇಕಾದ ಸದಾಚಾರವೂ ಉಂಟು. ನಾವು ಮಾಡತಕ್ಕ ಸಮಸ್ತ ಕಾರ್ಯಗಳಲ್ಲಿಯೂ, ನಮ್ಮ ಆಟದಲ್ಲಿಯೂ, ನಮ್ಮ ಕೆಲಸದಲ್ಲಿಯೂ, ಈಶ್ವರನನ್ನು ಧ್ಯಾನಿಸಬೇಕು. ನಾವು ಆವನ ಸೇವೆ ಮಾಡುವುದಕ್ಕೂ, ಅವನ ಕಟ್ಟಳೆಯಂತೆ ಕೆಲಸಮಾಡಲು ಯಾವಾಗಲೂ ಇಷ್ಟವುಳ್ಳವರಾಗಿರುವುದಕ್ಕೂ ಪ್ರಯತ್ನಪಡಬೇಕು. ನಿಮಗೆ ಸಾಕಾದಷ್ಟು ವಯಸ್ಸಾದಾಗ "ಭಗವದ್ಗೀತೆ" ಎಂಬ ಒಂದು ಸುಂದರವಾದ ಪುಸ್ತಕವನ್ನು ಓದಬಹುದು. ಈ ಪುಸ್ತಕದಲ್ಲಿ ಶ್ರೀ ಕೃಷ್ಣನು,

ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ||
ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಂ ||

ಎಂದು ಹೇಳಿರುವನು. ಅಂದರೆ—ಏನನ್ನು ಮಾಡಿದರೂ, ಏನನ್ನು ತಿಂದರೂ, ಏನನ್ನು ದೇವತೆಗಳಿಗೆ ಸಮರ್ಪಿಸಿದರೂ, ಏನನ್ನು ದಾನಮಾಡಿದರೂ, ಯಾವ ತಪಸ್ಸನ್ನು ಮಾಡಿದರೂ ಎಲ್ಲವನ್ನೂ ನನಗೆ ಸಮರ್ಪಿಸು'' ಎಂದು ಹೇಳಿರುತ್ತಾನೆ. ಇದೇ ದೇವರ ಪೂಜೆ-ಇದೇ ಭಕ್ತಿ-ಇಂಥ ಸತ್ಕಾರ್ಯಗಳ ವಿಷಯವಾಗಿ ನಾವು ಅನೇಕ ಕಥೆಗಳನ್ನು ಓದಬಹುದು. ಬಲಹೀನರಾದವರಿಗೆ ಮತ್ತು ಅಸಹಾಯರಿಗೆ ಮಾಡಬೇಕಾದ ಸತ್ಕಾರ್ಯಗಳು, ಸಮಸ್ತ ಜನರನ್ನೂ, ಸಮಸ್ತ ಪ್ರಾಣಿಗಳನ್ನೂ ನಾವು ಪ್ರೀತಿಸಬೇಕಾದ ಸತ್ಕಾರ್ಯಗಳು, ಇವುಗಳಿಂದ ಪ್ರಾರಂಭಿಸೋಣ. ಪ್ರಪಂಚದಲ್ಲಿರುವ ಗಂಡಸರು, ಹೆಂಗಸರು, ಚಿಕ್ಕ ಮಕ್ಕಳು, ಪ್ರಾಣಿಗಳು, ಕೀಟಗಳು ಆದಿಯಾಗಿ ಸಮಸ್ತ ಸಜೀವ ವಸ್ತುಗಳಿಗೂ ಸಹಾಯಮಾಡುವುದಕ್ಕೆ ನಾವು ಪ್ರಯತ್ನಿಸಬೇಕು.

ಎಲ್ಲಾ ಪ್ರಾಣಿಗಳನ್ನೂ ಪ್ರೀತಿಸುವುದೂ, ಮತ್ತು ಯಾವುದಾದರೂ ಪ್ರಾಣಿಯು ಸಂಕಟಪಡುವಾಗ ನಾವು ದುಃಖಪಡುವುದೂ ಒಳ್ಳೆಯದು. ಎಂದಾದರೂ ಯಾವಪ್ರಾಣಿಯನ್ನಾದರೂ ಹಿಂಸಿಸದೆ ಇರುವುದು ಒಳ್ಳೆಯದು. ಹೀಗೆ ಪ್ರೀತಿಸುವುದೆ ‹‹ಕನಿಕರ'' ವೆನ್ನಿಕೊಳ್ಳುತ್ತದೆ. ‹‹ಕನಿಕರ'' ವೆಂದರೆ ‹‹ಪ್ರೀತಿ ಮತ್ತು ದಯೆ'' ಎಂದರ್ಥವಾಗುತ್ತದೆ. ಒಂದು ಚಿಕ್ಕ ಮಗುವು ಕಷ್ಟಪಡುತ್ತಿರುವ ಯಾವುದಾದರೂ ಒಂದು ಪ್ರಾಣಿಗೆ ದಯೆಯನ್ನು ತೋರಿಸಿ ಅದಕ್ಕೆ ಸಹಾಯಮಾಡುವುದಕ್ಕೆ ಪ್ರಯತ್ನಿಸಿದರೆ ಆ ಮಗುವು ಕನಿಕರವೆಂಬ ಸದ್ಗುಣವನ್ನು ತೋರಿಸಿದಂತಾಗುವುದು. ಒಂದು ಸಣ್ಣ ಮಗುವಾಗಲೀ ಅಥವಾ ವಯಸ್ಸಾದ ಗಂಡಸಾಗಲೀ, ಹೆಂಗಸಾಗಲೀ ಕಷ್ಟದಿಂದ ಪೀಡಿತರಾದವರಿಗೆ ಸಹಾಯಕರಾಗಿಯೂ, ದಯಾಳುಗಳಾಗಿಯೂ ಇದ್ದರೆ ಅವರು ಕನಿಕರವುಳ್ಳವರಾಗುವರು. ನಾವು ಪ್ರೀತಿಯಿಂದ,ರೋಗಿಷ್ಟರಿಗೆ ಉಪ

ಜರಿಸುವುದೂ, ಬಲಹೀನರಿಗೆ ಸಹಾಯಮಾಡುವುದೂ, ಹಸಿದವರಿಗೆ ಸಂತೋಷದಿಂದ ಭೋಜನಮಾಡಿಸುವುದೂ, ಕನಿಕರದ ಕಾರ್ಯವೆನಿಸುತ್ತದೆ.

ಪ್ರೀತಿಯ ನುಡಿಯುಂ ದಯೆಯುಂ |
ದೇತರದೊಳು ಮೆಸಪಸಣ್ಣ ಸಣ್ಣು ಪಕ್ಕೃತಿಯುಂ ||
ಭೂತಲಮಂ ದೇವತೆಗಳ |
ಭೂತಲವೆಂದೆನಿಸು ತೀವುದತಿಸಂತಸಮಂ ||



# * ಆರ್ಯನೀತಿ *

## "ಕನಿಕರ" (Compassion.)

### ಧರ್ಮಿಷ್ಠನಾದ ರಂತಿದೇವನೆಂಬ ರಾಜನ ಕಥೆ.

ಮಹಾಭಾರತವೆಂಬ ಪುರಾತನಗ್ರಂಥದಲ್ಲಿ ಇತರರಿಗೆ ಕನಿಕರವನ್ನು ತೋರಿಸುತಿದ್ದ ಒಬ್ಬ ದೊಡ್ಡ ರಾಜನ ವಿಷಯವಾಗಿ ಒಂದು ಸುಂದರವಾದ ಕಥೆಯಿರುವುದು. ಆ ಕಥೆಯನ್ನು ನಾನು ನಿಮಗೆ ಹೇಳುವೆನು.

ಒಂದಾನೊಂದು ಕಾಲದಲ್ಲಿ ರಂತಿದೇವನೆಂಬ ರಾಜನಿದ್ದನು. ಅವನು ಸಾಕ್ರ್ತಿಯ ಮಗನು. ಆತನು ಬಡವರಿಗೆ ಯಾವಾಗಲೂ ಅನ್ನವನ್ನೂ, ಹಣವನ್ನೂ, ಕೊಡುತ್ತಾ ಇದ್ದುದರಿಂದ ಒಳ್ಳೆಯ ರಾಜನೆಂದು ಕರೆಯಲ್ಪಡುತ್ತಿದ್ದನು. ಅನ್ನವು ಸ್ವಲ್ಪವೇ ಇದ್ದ ವೇಳೆಯಲ್ಲಿ ಹಸಿದವರು ಬರುತ್ತಿದ್ದರು. ಆಗ ಇದ್ದ ಅನ್ನವನ್ನು ಅವರಿಗೆ ಬಡಿಸಿ ತಾನೂ ತನ್ನ ಹೆಂಡತಿಯೂ ಉಪವಾಸವಿರುತ್ತಿದ್ದರು.

ಒಂದಾವೃತ್ತಿ ಅವನೂ ಅವನ ಸಂಗಡವಿದ್ದವರೂ ಅನೇಕದಿನಗಳವರೆಗೆ ಆಹಾರವಿಲ್ಲದೆ ಇದ್ದುದರಿಂದ ಹಸಿವಿನಿಂದ ಪೀಡಿತರಾಗಿದ್ದರು. ಯಾರೋ ಒಬ್ಬರು ಸ್ವಲ್ಪ ಆಹಾರವನ್ನೂ, ಸ್ವಲ್ಪ ಸೊಗಸಾದ, ಮಧುರವಾದ ಹಾಲನ್ನೂ, ತುಪ್ಪವನ್ನೂ, ರೊಟ್ಟಿಯನ್ನೂ, ನೀರನ್ನೂ ಸಹ ಅವರಿಗೋಸ್ಕರ ತಂದುಕೊಟ್ಟರು. ಅವರು ಕುಳಿತುಕೊಂಡು

ಭೋಜನಮಾಡುವಷ್ಟರಲ್ಲಿಯೇ ಒಬ್ಬ ಬ್ರಾಹ್ಮಣ ಅತಿಥಿಯು ಒಳಗೆ ಬಂದು, " ನಾನೂ ಸಹ ಹಸಿದಿರುವೆನು. ನನಗೂ ಕೊಂಚ ಆಹಾರವನ್ನು ಕೊಡು " ಎಂದು ಕೇಳಿದನು. ರಂತಿದೇವನು ಆತನಿಗೆ ಆಹಾರವನ್ನು ಕೊಡುವುದಕ್ಕೆ ಬಹಳ ಸಂತೋಷಪಟ್ಟು ಮೊದಲು ಅವನಿಗೆ ಬಡಿಸಿದನು.

ತನ್ನ ಭೋಜನವಾದಕೂಡಲೇ ಬ್ರಾಹ್ಮಣನು ಹೊರಟುಹೋದನು. ಆಮೇಲೆ ರಂತಿದೇವನು ಉಳಿದ ಆಹಾರವನ್ನು ಎಲ್ಲರಿಗೂ ಸಮನಾಗಿ ಬರುವಂತೆ ಹಂಚಿದನು. ತನ್ನ ಭಾಗವನ್ನು ತಿನ್ನುವಷ್ಟರಲ್ಲಿಯೇ ಒಬ್ಬ ಶೂದ್ರನು ಒಳಗೆ ಬಂದು ತನಗೆ ಸ್ವಲ್ಪ ಆಹಾರಬೇಕೆಂದು ರಂತಿದೇವನನ್ನು ಕೇಳಿದನು. ರಂತಿದೇವನು ತಾನು ಸ್ವಲ್ಪವನ್ನಾದರೂ ತಿನ್ನದೇ ಇದ್ದಾಗ್ಯೂ ಅವನಿಗೆ ಕೊಂಚ ಆಹಾರವನ್ನು ಕೊಟ್ಟನು.

ಆಮೇಲೆ ಆಹಾರವು ಬಹಳ ಸ್ವಲ್ಪವೇ ಉಳಿದಿತ್ತು. ರಂತಿದೇವನು ಅದನ್ನು ತಿನ್ನುವುದಕ್ಕೆಪ್ರಾರಂಭಿಸುವಷ್ಟರಲ್ಲಿಯೇ ಒಂದು ಹಿಂಡು ನಾಯಿಗಳೊಂದಿಗೆ ಒಬ್ಬ ಮನುಷ್ಯನು ಬಂದನು. ಅವನಿಗೂ ಸಹ ಆಹಾರವು ಬೇಕಾಗಿತ್ತು. ಧರ್ಮಿಷ್ಠನಾದ ರಾಜನು ಉಳಿದಿದ್ದ ಆಹಾರವನೆಲ್ಲವನ್ನೂ ಆ ಮನುಷ್ಯನಿಗೂ ನಾಯಿಗಳಿಗೂ ಕೊಟ್ಟುಬಿಟ್ಟನು. ಅನಂತರ ಅವನಿಗೆ ಒಂದು ಬಟ್ಟಲು ನೀರುಮಾತ್ರ ಉಳಿದಿತ್ತು.

ಮನುಷ್ಯನು ನಾಯಿಗಳೊಡನೆ ಹೊರಟುಹೋದನು. ರಂತಿದೇವನು ಬಹಳ ಬಾಯಾರಿಕೆಯಿಂದ ಸಂಕಟಪಡುತ್ತಿದ್ದನು. ಆದುದರಿಂದ ಒಂದು ಗುಟುಕು ನೀರನ್ನಾದರೂ ಕುಡಿಯಬೇಕೆಂದಿದ್ದನು. ಅಲ್ಲಿ ಉಳಿದಿದ್ದುದೂ ಅಷ್ಟೇ ಆಗಿತ್ತು. ಆ ವೇಳೆಗೆ ಒಬ್ಬ ಬಡಭಿಕ್ಷುಕನು ಬಂದು, " ನನಗೆ ಬಹಳ ಬಾಯಾರಿಕೆ, ನನಗೆ ಬಹಳ ಬಾಯಾರಿಕೆ; ನಾನು ನಿನ್ನನ್ನು ಬೇಡಿಕೊಳ್ಳುವೆನು. ನನಗೆ ನೀರನ್ನುಕೊಡು " ಎಂದು ಗಟ್ಟಿಯಾಗಿ ಕೂಗಿಕೊಂಡನು. ಅವನು ಒಬ್ಬ ಅಂತ್ಯಜನಾ

ಗಿದ್ದಾಗ್ಲೂ ಬಹಳ ಆಯಾಸಪಟ್ಟು ಸಂಕಟಪಡುತ್ತಿದ್ದ ಅವನನ್ನು ನೋಡಿ. ದಯಾಳುವಾದ ಮತ್ತು ಪ್ರೀತಿಯಿಂದ ಕೂಡಿದ ರಾಜನು ಆದರದಿಂದ ಆ ಬಡಭಿಕ್ಷುಕನಿಗೆ ನೀರನ್ನು ಕುಡಿಸಲು ಹೋದನು. ಬಟ್ಟಲನ್ನು ರಾಜನು ಭಿಕ್ಷುಕನ ಬಾಯಿಯ ಹತ್ತಿರ ಹಿಡಿದುಕೊಂಡಿದ್ದಾಗ ಅತ್ಯಂತ ಪ್ರೀತಿಯಿಂದ ತುಂಬಿದವನಾಗಿ, "ನನಗೆ ಹಸಿವುಬಾಯಾರಿಕೆಗಳ ಬಾಧೆಯೇ ಇಲ್ಲ. ನಾನು ಇತರರಿಗೆ ಸಹಾಯಮಾಡಿ ಅವರ ಕಷ್ಟಗಳನ್ನು ಹೋಗಲಾಡಿಸುವಂತೆಯೂ, ಅವರ ಕಷ್ಟವನ್ನೂ, ದುಃಖವನ್ನೂ, ವಹಿಸುವ ಶಕ್ತಿಯನ್ನು ಮಾತ್ರ ನನಗೆ ಕೊಡಬೇಕೆಂದೂ ಶ್ರೀಹರಿಯನ್ನು ಕೇಳಿಕೊಳ್ಳುವೆನು." ಎಂದು ಹೇಳಿದನು.

ಬ್ರಾಹ್ಮಣರಾಗಲೀ, ಶೂದ್ರರಾಗಲೀ, ಅಂತ್ಯಜರಾಗಲೀ, ಭಿಕ್ಷುಕರಾಗಲೀ,—ಎಲ್ಲರ ವಿಷಯದಲ್ಲಿಯೂ ದಯೆಯುಳ್ಳವರಾಗಿರಬೇಕೆಂತಲೂ, ಎಲ್ಲರಿಗೂ ಸಹಾಯಮಾಡಬೇಕೆಂತಲೂ ರಂತಿದೇವನು ನಮಗೆ ಹೇಗೆ ತೋರಿಸುತ್ತಾನೆ ನೋಡಿದಿರಾ. ಈ ಒಳ್ಳೆಯ ರಾಜನು ಮಾಡಿದಂತೆ ನಾವು ನಮ್ಮ ಆಹಾರವೆಲ್ಲವನ್ನೂ ಕೊಡಲಾರೆವು. ಆದರೆ ಹಸಿದಿರುವವರಿಗೆ ನಾವು ಸ್ವಲ್ಪವನ್ನಾದರೂ ಕೊಡಲು ಅನೇಕವೇಳೆ ಶಕ್ತರಾಗಿರುತ್ತೇವೆ. ಸಣ್ಣಸಣ್ಣ ಮಕ್ಕಳೂಸಹ ರೋಗಿಷ್ಟರಿಗೂ, ತೊಂದರೆಪಡುತ್ತಿರುವವರಿಗೂ ಸಣ್ಣಸಣ್ಣ ಪ್ರೀತಿಯ ಕೆಲಸಗಳನ್ನು ಯಾವಾಗಲೂ ಮಾಡಬಲ್ಲರು. ನಮ್ಮ ಕುಟುಂಬ ವರ್ಗದವರಾಗಲೀ, ನೆರೆಹೊರೆಯವರಾಗಲೀ, ಐಶ್ವರ್ಯವಂತರಾಗಲೀ, ಬಡವರಾಗಲೀ, ಬ್ರಾಹ್ಮಣರಾಗಲೀ, ಶೂದ್ರರಾಗಲೀ ಎಲ್ಲರನ್ನೂ ನಾವು ಪ್ರೀತಿಸಬೇಕು. ಯಾವನೊಬ್ಬ ಮನುಷ್ಯನಾಗಲೀ ನಮ್ಮ ಸಹಾಯವನ್ನು ಅಪೇಕ್ಷಿಸಿದರೆ ಅಂಥವನನ್ನು ನಮ್ಮ ಸಹೋದರನಂತೆ ಭಾವಿಸಬೇಕು.

## ಪರೋಪಕಾರ. (Helpfulness.)

ಗೋದಿಯೊಂದಂ ಪಡೆದು ತಾನದ |
ಮಾದರದೆ ಕೊಂಡೊಯ್ಯಲಾರದೆ |
ಸೋದರನನೊಂದಿರುವೆ ಬೇಡಿತು ನೆರವ ಮಾಡೆನುತ ||
ಆದೊಡದು ನಿದ್ರೆಯನು ಮಾಡಲು |
ಪೋದುದಲಸತೆಯಿಂದ ದುಷ್ಟರು |
ಸೋದರಗೆ ನೆರವೆಂತು ಮಾಡುವರಣುಗ ಯೋಚಿಸುನೀಂ ||೧||

ಹೀಗಿರಲು ಮತ್ತೊಂದುಇರುವೆಯು |
ಪೋಗುತಾದಾರಿಯಲಿ ತಾಂ ನೆರ |
ವಾಗುತಾಗೋದಿಯನು ಗೂಡಿಗೆ ಮುದದೆ ಸಾಗಿಸಿತು ||
ಈಗುಣವನಭ್ಯಸಿಸು ನೀಂ |
ನೆರವಾಗು ಜನರಿಗೆ ಬೇಡದಿರ್ದರು |
ಪೋಗುತಲಿ ಪೋರೆಯೊಂದಿಗೊಡಗಿದ ಇರುವೆಯಂದದಲಿ ||೨||

ಇರುವೆಯಂದದಲಿರುವರಣುಗರು |
ನೆರವಿಯೊಳಗದರಿಂದಲವರಿಗೆ |
ನೆರವು ಮಾಡುವ ಬುದ್ಧಿಯೊದಗುವುದೆನುತಲೀ ಕಥೆಯ ||
ಬರೆದೆನೀ ಕೀಟಗಳು ಪರರಿಗೆ |
ನೆರವ ಮಾಡುತಲಿರಲು ಮಕ್ಕಳು |
ಪರಿಪರಿಯೊಳುಪಕೃತಿಯಗೈವುದು ಜನಕೆ ಮುದದಿಂದ ||೩||

---

## ಅಹಿಂಸೆ. (Harmlessness.)

ದಯಾಳುಗಳಾಗಿದ್ದುಕೊಂಡು ನಾವು ಕಷ್ಟಪಡುತ್ತಿರುವವರಿಗೆ ಸಹಾಯಮಾಡಿ ಅವರ ಕಷ್ಟವನ್ನು ತಪ್ಪಿಸುವುದಕ್ಕೆ ಪ್ರಯತ್ನಮಾಡು

ವುದಲ್ಲದೆ ಇತರರನ್ನು ಹಿಂಸಿಸದೆ ಇರುವುದಕ್ಕೂ ಪ್ರಯತ್ನಪಡಬೇಕು. "ಅಹಿಂಸಾ ಪರಮೋಧರ್ಮಃ" ಎಂದು ಕೃಷ್ಣನು ಹೇಳಿರುವನು. ಅಹಿಂಸೆಯೆಂದರೇನು ? ಕೈಲಾದಮಟ್ಟಿಗೂ ಇತರರನ್ನು ನೋಯಿಸಬಾರದೆಂಬುದೇ ಇದರರ್ಥವು. ಅನೇಕವೇಳೆಗಳಲ್ಲಿ ಸಣ್ಣಮಕ್ಕಳು ಪ್ರಾಣಿಗಳನ್ನೂ, ಇತರ ಮಕ್ಕಳನ್ನೂ ನೋಯಿಸುವರು. ಅನೇಕ ಮಕ್ಕಳು ಮನೆಯ ಕರುಗಳನ್ನು ಓಡಾಡಿಸುವುದಕ್ಕೆ ತೆಗೆದುಕೊಂಡು ಹೋಗುತ್ತಾರಷ್ಟೆ. ಆ ವೇಳೆಯಲ್ಲಿ ಅವುಗಳನ್ನು ಕೈಯಿಂದಲೂ, ಕಡ್ಡಿಯಿಂದಲೂ, ಹೊಡೆಯುವರು. ಬಾಲವನ್ನು ನುಲಿಯುವರು. ಹಗ್ಗವನ್ನು ಹಿಡಿದೆಳೆಯುವರು. ಹೀಗೆ ಮಾಡುವುದೇ ಪ್ರಾಣಿಹಿಂಸೆಯೆನಿಸಿಕೊಳ್ಳುವುದು. ಈ ರೀತಿಮಾಡುವುದು ಏಕೆಂದರೆ ಬಾಲಕರು ನಿದಾನವಾಗಿ ಆಲೋಚನೆ ಮಾಡುವುದಿಲ್ಲ. ಆದ್ದರಿಂದ ಉದ್ದೇಶವಿಲ್ಲದೆ ಅನೇಕವೇಳೆ ಕೆಡುಕನ್ನು ಮಾಡುವರು. ಒಬ್ಬ ಬಾಲಕನು ಬಲವಾಗಿದ್ದರೆ ಬಲಹೀನನಾದ ಚಿಕ್ಕಹುಡುಗನನ್ನು ನೋಯಿಸುವುದಕ್ಕಾಗಿ ತನ್ನ ಶಕ್ತಿಯನ್ನು ಉಪಯೋಗಿಸಬಾರದು

ನಾವು ಎಲ್ಲಾ ಪ್ರಾಣಿಗಳ ವಿಷಯದಲ್ಲಿಯೂ ದಯಾಳುಗಳಾಗಿರಬೇಕು. ಏಕೆಂದರೆ, ಅವುಗಳು ಮಾತನಾಡಲಾರವು ಆದುದರಿಂದ ತಮ್ಮ ನೋವನ್ನು ಪರರಿಗೆ ತಿಳಿಸುವ ಶಕ್ತಿಯು ಅವುಗಳಿಗಿಲ್ಲ. ನಮ್ಮ ಹತ್ತಿರಕ್ಕೆ ಬಂದ ನಾಯಿ, ಬೆಕ್ಕು, ಮುಂತಾದ ಸಾಧುವಾದ ಪ್ರಾಣಿಗಳನ್ನು ಹೊಡೆಯಬಾರದು. ಒಂದು ಭಾರವಾದ ಹೊರೆಯನ್ನೆಳೆಯುವುದರಲ್ಲಿ ತನ್ನ ಶಕ್ತಿಯನ್ನೆಲ್ಲಾ ಉಪಯೋಗಿಸುತ್ತಿರುವ ಕುದುರೆಯನ್ನಾಗಲೀ, ತನ್ನ ಶಕ್ತಿಗೆ ಮೀರಿದ ಹೊರೆಯನ್ನು ಹೊರುತ್ತಿರುವ ಕತ್ತೆಗಳನ್ನಾಗಲೀ ಹೊಡೆಯುತ್ತಿರುವವರನ್ನು ನೋಡಿದರೆ ಅವರು ಹಾಗೆ ಹೊಡೆಯದಂತೆ ತಡಮಾಡಬೇಕು. ದೇವರು ನಿರ್ಮಿಸಿದ ಎಲ್ಲಾ ಪ್ರಾಣಿಗಳಿಗೂ ನಾವು ದಯೆಯನ್ನು ತೋರಿಸಬೇಕು. ಪ್ರಾಣಿ

ಗಳನ್ನು ಹಿಂಸಿಸಿದರೆ ನಮ್ಮಂತೆಯೇ ಅವುಗಳೂ ನೋವನ್ನು ಅನುಭವಿಸುವುವೆಂಬುದನ್ನು ಮರೆಯದಿರಬೇಕು. ಎಲ್ಲಿಯಾದರೂ ಓಡಿಹೋಗದಂತೆ ಮಾಡುವುದಕ್ಕೆ ಕತ್ತೆಗಳ ಮತ್ತು ಟಾಕಣಗಳ ಕಾಲುಗಳನ್ನು ಬಲವಾಗಿ ಕಟ್ಟುತ್ತಾರೆ. ಇದು ಕ್ರೂರವಾದ ಕೆಲಸ; ಇದಲ್ಲದೆ ಹಿಂಗಾಲುಮುಂಗಾಲುಗಳನ್ನು ಸೇರಿಸಿ ಕಟ್ಟುವುದು ಇನ್ನೂ ಕ್ರೂರವಾದುದು.

ನಿಮ್ಮನ್ನು ಯಾರಾದರೂಹೊಡೆದರೆ ಅಥವಾ ಚಿಗುಟಿದರೆ ನಿಮಗೆ ನೋವಾಗುವುದೆಂಬುದು ಗೊತ್ತಿರುವುದು. ಏಕೆ ನೋವಾಗುವುದೆಂಬುದನ್ನು ನೀವು ಬಲ್ಲಿರಾ? ಹೇಳುವೆನು ಕೇಳಿ:—

ನಿಮ್ಮ ಶರೀರದಮೇಲೆ ಚರ್ಮದಲ್ಲೆಲ್ಲಾ ಸಣ್ಣದಾರದ ತುದಿಗಳಂತಿರುವ ನರಗಳು ಹರಡಿಸಿಕೊಂಡಿರುತ್ತವೆ. ನಿಮ್ಮ ಚರ್ಮದಲ್ಲಿ ಯಾವ ಭಾಗವನ್ನು ನೋಯಿಸಿದರೂ ಆ ನರಗಳು ನೋವನ್ನು ಮಿದುಳಿಗೆ ತಲಪಿಸುತ್ತವೆ. ಈ ಮಿದುಳು ನಿಮ್ಮ ತಲೆಯಲ್ಲಿದೆ. ಈ ಮಿದುಳೇ ನೀವು ಯಾವುದನ್ನಾದರೂ ಆಲೋಚಿಸುವ ಅವಯವವು. ತಂತಿಯು ವರ್ತಮಾನದಂತೆ ನರಗಳು ಮಿದುಳಿಗೆ ನೋವಿನ ವರ್ತಮಾನವನ್ನು ಕಳುಹಿಸುತ್ತವೆ. ಆಗ ನಮ್ಮ ಮಿದುಳು ನೋವನ್ನು ತಿಳಿಸುತ್ತದೆ. ಆಮೇಲೆ ನಮ್ಮ ಇಂಥಾ ಅಂಗದಲ್ಲಿ ನೋವಾಗುವುದೆಂದು ಹೇಳುತ್ತೇವೆ. ಎಲ್ಲಾ ಪ್ರಾಣಿಗಳಿಗೂ ನಮ್ಮಂತೆಯೇ ಮಿದುಳೂ ಮತ್ತು ನರಗಳೂ ಇರುತ್ತವೆ. ಅವುಗಳಿಗೆ ಮಾತನಾಡುವುದಕ್ಕೆ ಬರುತ್ತಿದ್ದರೆ ಅವುಗಳಿಗೆ ನೋವನ್ನುಂಟುಮಾಡಿದಾಗ "ನಮಗೆ ನೋವಾಗುತ್ತದೆ." ಎಂದು ಹೇಳುತ್ತಿದ್ದವು. ಆದರೂ ಮಾತನಾಡುವುದಕ್ಕೆ ಬಾರದ ಮೂಗನು ತನಗಾದ ನೋವನ್ನು ಅಂಗಚೇಷ್ಟೆಯಿಂದ ಹೇಗೆ ತಿಳಿಸುತ್ತಾನೋ ಅದೇ ರೀತಿ ಕರು, ನಾಯಿ, ಬೆಕ್ಕು ಮುಂತಾದ ಪ್ರಾಣಿಗಳು ತಮ್ಮ ಹಿಂಸೆಯನ್ನು ಕೂಗಿನಿಂದಲೂ ಅಂಗಚೇಷ್ಟೆಯಿಂದಲೂ ತಿಳಿಸುತ್ತವೆ.

ಆದ್ದರಿಂದ ನೀವು ಪ್ರಾಣಿಗಳನ್ನು ಹೊಡೆಯಬಾರದು. ಅವುಗಳಮೇಲೆ ಕಲ್ಲುಗಳನ್ನೆಸೆಯಬಾರದು. ಯಾವ ವಿಧದಲ್ಲಿಯೂ ಅವುಗಳನ್ನು ನೋಯಿಸಬಾರದು. ಅವುಗಳನ್ನು ನಮ್ಮ ಸೇವೆಗೆ ಉಪಯೋಗಿಸಿಕೊಳ್ಳಬಹುದು. ಆದರೂ ಅವುಗಳನ್ನು ಕರುಣೆಯಿಂದ ನೋಡಿಕೊಳ್ಳಬೇಕು.

---

## ತುಲಾಧಾರ ಮತ್ತು ಜಾಬಾಲಿ.

ಈಗ ಅಹಿಂಸೆಯ ವಿಷಯವಾಗಿ ನಾನು ನಿಮಗೊಂದು ಕಥೆಯನ್ನು ಹೇಳುವೆನು. ಒಂದಾನೊಂದು ಕಾಲದಲ್ಲಿ ಜಾಬಾಲಿಯೆಂಬೊಬ್ಬ ಬ್ರಾಹ್ಮಣನು ಕಾಡಿನಲ್ಲಿ ವಾಸಮಾಡಿಕೊಂಡಿದ್ದನು. ಅವನು ಸ್ವಲ್ಪವೇ ಆಹಾರವನ್ನು ತೆಗೆದುಕೊಳ್ಳುತ್ತಾ ಮತ್ತು ಚಿಂದಿ ಬಟ್ಟೆಗಳನ್ನು ಸೇರಿಸಿ ಅದನ್ನೇ ಹೊದ್ದುಕೊಳ್ಳುತ್ತಾ ಉಗ್ರವಾದ ತಪಸ್ಸನ್ನು ಮಾಡುತ್ತಿದ್ದನು. ಹೀಗೆ ಅನೇಕ ವರ್ಷಗಳು ಕಳೆದವು. ಆಮೇಲೆ ಜಾಬಾಲಿಯು ತನ್ನ ತಪಸ್ಸಿಗೆ ತಾನೇ ಸಂತೋಷಪಟ್ಟು, ಇತರರಿಗಿಂತಲೂ ತಾನು ಉತ್ತಮನೆಂತಲೂ,ದೊಡ್ಡವನೆಂತಲೂ ಯೋಚಿಸಿ 'ನಾನು ಅತ್ಯಂತ ಮಹಿಮೆಯನ್ನು ಸಂಪಾದಿಸಿರುವೆನು. ಈ ಚರಾಚರಾತ್ಮಕವಾದ ಪ್ರಪಂಚದಲ್ಲಿ ನನಗೆ ಸಮಾನರಾದವರು ಯಾರೂ ಇಲ್ಲ'' ಎಂದು ಹೇಳಿಕೊಳ್ಳುತ್ತಾ ಬಹಳ ಅಹಂಕಾರಪಡುತ್ತಿದ್ದನು. ಆ ಸಮಯದಲ್ಲಿ ''ಎಲೈ ಜಾಬಾಲಿಯೇ, ನೀನು ಇಂಥಾ ಮಾತುಗಳನ್ನಾಡಬೇಡ. ತುಲಾಧಾರನೆಂಬುವನು ಹಗಲೆಲ್ಲಾ ಕೊಂಡುಮಾರುವ ಬಹಳ ಕಷ್ಟವಾದ ಕೆಲಸವನ್ನು ಮಾಡುತ್ತಿರುವನು. ಆದರೂ ಆತನು ನಿನಗಿಂತಲೂ ಹೆಚ್ಚು ಜ್ಞಾನಿಯಾಗಿಯೂ, ಸದಾಚಾರವುಳ್ಳವನಾಗಿಯೂ,

ಇರುವನು. ನಿನಗಿಂತಲೂ ಶ್ರೇಷ್ಠನಾದ ಅವನೂ ಇಂತಹ ಮಾತನ್ನಾಡಲು ಯೋಗ್ಯನಲ್ಲ.'' ಎಂದು ಆಕಾಶದಲ್ಲೊಂದು ಧ್ವನಿಯಾಯಿತು.

ಇದನ್ನು ಕೇಳಿ ಆ ಬ್ರಾಹ್ಮಣನು, ಈ ತುಲಾಧಾರನೆಂಬುವನು ಯಾರಾಗಿರಬಹುದೆಂದು ಬಹಳಆಶ್ಚರ್ಯಪಟ್ಟನು. ಇವನು ಬಹಳ ಗರ್ವಿಷ್ಠನಾಗಿದ್ದುದರಿಂದ ಈ ಮಾತನ್ನು ಕೇಳಿ ಅವನಿಗೆ ಕೋಪವೂ ಬಂದಿತು. ಬ್ರಾಹ್ಮಣನಾದ ತನಗಿಂತಲೂ ಒಬ್ಬ ವ್ಯಾಪಾರಿಯು ದೊಡ್ಡವನೆಂದು ಹೇಳಿದ ಮಾತನ್ನು ಕೇಳುವುದಕ್ಕೆ ಅವನಿಗೆ ಇಷ್ಟವಿರಲಿಲ್ಲ. ಆದುದರಿಂದ ತುಲಾಧಾರನನ್ನು ಕಂಡು ಅವನೆಂತಹ ಮಹಾಪುರುಷನೆಂಬುದನ್ನು ಪರೀಕ್ಷಿಸಬೇಕೆಂದು ನಿಶ್ಚಯಿಸಿದನು.

ಬಹಳಕಾಲದಮೇಲೆ ಕಾಶೀಪಟ್ಟಣದಲ್ಲಿ ಅವನನ್ನು ಕಂಡನು. ತುಲಾಧಾರನು ಪೇಟೆಯಲ್ಲಿ ಮಾರಾಟದಲ್ಲಿದ್ದನು. ಈ ಬ್ರಾಹ್ಮಣನು ತನ್ನ ಸಮೀಪಕ್ಕೆ ಬಂದಕೂಡಲೇ ಮೇಲಕ್ಕೆದ್ದು ಯೋಗ್ಯವಾದ ರೀತಿಯಲ್ಲಿ ವಂದಿಸಿ ಆತನು ತನ್ನಲ್ಲಿಗೆ ಬಂದ ಸಂಗತಿಯನ್ನೂ ಅಶರೀರವಾಣಿಯ ವಿಷಯವನ್ನೂ, ಆ ಮಾತುಗಳನ್ನೂ, ಆ ಬ್ರಾಹ್ಮಣನಿಗೆ ತಾನೇ ಮುಂಚಿತವಾಗಿ ಹೇಳಿದನು. ಹೀಗೆ ಹೇಳಲು ಅವನಿಗೇನು ಶಕ್ತಿಯಿತ್ತು? ಅವನಿಗೆ ಒಳ್ಳೆಯ ಜ್ಞಾನವಿದ್ದಿತು. ಈ ಜ್ಞಾನದಿಂದಲೇ ಈ ಬ್ರಾಹ್ಮಣನ ಚರಿತ್ರೆಯೆಲ್ಲವನ್ನೂ ತಿಳಿದಿದ್ದನು. ಇದನ್ನು ನೋಡಿ ಜಾಬಾಲಿಯು ಬಹಳ ಆಶ್ಚರ್ಯಪಟ್ಟು "ನೀನು ಒಬ್ಬ ವ್ಯಾಪಾರಗಾರನ ಮಗನಾಗಿ ಬಹಳ ಕಷ್ಟವಾದ ಕೊಳ್ಳುವ ಮತ್ತು ಮಾರುವ ಕೆಲಸವನ್ನು ಯಾವಾಗಲೂ ಮಾಡುತ್ತಿರುವ ನಿನಗೆ ಇಷ್ಟು ಹೆಚ್ಚಾದ ಜ್ಞಾನವು ಹೇಗೆ ಬಂದಿತು? ಇದನ್ನು ನನಗೆ ವಿಸ್ತಾರವಾಗಿ ಹೇಳು.'' ಎಂದು ಕೇಳಿದನು. ನನ್ನ ಈ ಜ್ಞಾನವೆಲ್ಲಾ ನಾನು ಪ್ರಾಣಿಹಿಂಸೆ ಮಾಡದಿದ್ದುದರಿಂದಲೇ ಬಂದಿತು. ನಾನು ಎಲ್ಲರಿಗೂ ಒಳ್ಳೆಯದನ್ನು ಮಾಡುವುದಕ್ಕೂ ಸಾಧ್ಯವಾದಷ್ಟು ಇತರರಿಗೆ ಯಾರಿಗೂ ಹಿಂಸೆಯನ್ನು ಮಾಡದಿರುವುದಕ್ಕೂ

ಪ್ರಯತ್ನಪಡುತ್ತಿರುವೆನು. ಯಾವಾಗಲೂ ಯಾರೊಡನೆಯೂ ಜಗಳವಾಡಿದವನಲ್ಲ. ಯಾರನ್ನೂ ದ್ವೇಷಿಸಲಿಲ್ಲ. ನಾನೇ ಹೆಚ್ಚೆಂದು ಅಹಂಕಾರಪಡುತ್ತಿರಲಿಲ್ಲ. ಪೂರ್ವದ ಜ್ಞಾನಿಗಳು ಹೇಳಿರುವ ಸದಾಚಾರವೇ ಇದು. ನಾವು ಜ್ಞಾನವನ್ನು ಸಂಪಾದಿಸಬೇಕಾದರೆ ಅಭ್ಯಾಸಮಾಡಬೇಕಾದ ಸದಾಚಾರವೇ ಇದು.'' ಎಂದುಹೇಳಿದನು. ''ದಾನಗಳಿಗಿಂತಲೂ, ತಪಸ್ಸಿಗಿಂತಲೂ, ಅಹಿಂಸೆಯೇ ಉತ್ತಮವಾದುದು. ಇದಕ್ಕಿಂತ ಶ್ರೇಷ್ಠವಾದ ಧರ್ಮವೇ ಇಲ್ಲ.''

''ಎಲೈ ಬ್ರಾಹ್ಮಣನೇ, ವ್ಯಾಪಾರಮಾಡಿ ಲಾಭವನ್ನು ಸಂಪಾದಿಸುವುದಕ್ಕಾಗಲೀ, ಆಹಾರಕ್ಕಾಗಲೀ ಪ್ರಾಣಿಗಳನ್ನು ಕೊಲ್ಲಬಾರದು. ಯಾವ ವಿಧದಲ್ಲಿಯೂ ಅವುಗಳನ್ನು ಪೀಡಿಸಬಾರದು. ಅಂಗಹೀನಮಾಡಬಾರದು. ತಾಯಿಯಾದ ಕುರಿಯನ್ನು ನೋಡು. ತನ್ನ ಮರಿಗಳನ್ನೆಷ್ಟು ಪ್ರೀತಿಸುವುದು! ಜನಗಳು ಇವುಗಳನ್ನಗಲಿಸುವರು. ಆಗ ತಾಯಿಗೆ ಎಷ್ಟು ದುಃಖವುಂಟಾಗುವುದು ವಿಚಾರಮಾಡು! ಜನರು ಕುದುರೆಗಳಿಗೂ, ಎತ್ತುಗಳಿಗೂ ಭಾರವಾದ ಹೊರೆಯನ್ನು ಹೊರಿಸಿ ಹಿಂಸಿಸುತ್ತಾರೆ. ಇದು ಎಷ್ಟು ಸಂಕಟವನ್ನುಂಟುಮಾಡುತ್ತದೆ! ನಮ್ಮ ಶಾಸ್ತ್ರಗಳಲ್ಲಿ ಹಿಂಸೆಮಾಡಬೇಕೆಂದು ಹೇಳಿರುವುದೇ? ಇಲ್ಲ. ನಮ್ಮ ಪೂರ್ವಿಕರಾದ ಋಷಿಗಳು ಪ್ರಾಣಿಹಿಂಸೆಮಾಡದೆ ಅವುಗಳ ವಿಷಯದಲ್ಲಿ ದಯಾಳುಗಳಾಗಿರಬೇಕೆಂದು ಎಲ್ಲಾ ಶಾಸ್ತ್ರಗಳಲ್ಲಿಯೂ ಬರೆದಿರುವರು.'' ಎಂದು ಹೇಳಿದನು.

ಆಮೇಲೆ ಜಾಬಾಲಿಯು ತುಲಾಧಾರನು ಹೇಳಿದ ವಿಷಯಗಳನ್ನು ಕೇಳಿ ಬಹಳ ಸಂತೋಷಪಟ್ಟು ಇನ್ನೂ ಕೆಲವು ಪ್ರಶ್ನೆಗಳನ್ನು ಕೇಳಿದನು. ಅವನು ಹೇಳಿದ ಉತ್ತರಗಳನ್ನು ಗಮನವಿಟ್ಟು ಕೇಳಿ ತಿಳಿದುಕೊಂಡನು. ಈ ರೀತಿಯಾಗಿ ಒಬ್ಬ ವರ್ತಕನ ಮಗನಾದ

ತುಲಾಧಾರನು ಬ್ರಾಹ್ಮಣನಿಗೆ ಅಹಿಂಸೆಯಿಂದ ಸಂಪಾದಿಸಬಹುದಾದ ಜ್ಞಾನವನ್ನು ಬೋಧಿಸಿದನು.

ಕಂದ॥ ಬಿಂದುಗಳಿಂ ವಾರಿಧಿಯುಂ।
ಸುಂದರವಾದೊಂದು ಪುಳಿನತಳಮುಂ ಪಾಳಲಿಂ॥
ಕುಂದದವೊಲ್ ಸತ್ಕಾರ್ಯಮ।
ದೊಂದೊಂದಾಗಿರ್ದೊಡಪ್ಪುದದರಿಂ ಸುಕೃತಂ॥

---

## ಉತ್ತಮವಾದ ಧರ್ಮ. (The best Dharma.)

ಅಹಿಂಸೆಯೇ ಪರಮಧರ್ಮವೆಂದು ಶ್ರೀಕೃಷ್ಣನು ಹೇಳಿರುತ್ತಾನೆ. ಕ್ರೂರಿಯಾದವನು ಯಾವನೂ ಭಗವದ್ಭಕ್ತನಲ್ಲ. ಶ್ರೀಕೃಷ್ಣನು ಹೇಳಿರುವಂತೆ ಮಾಡಬೇಕಾದರೆ ನಾವು ಯಾರಿಗೂ ನೋವನ್ನುಂಟುಮಾಡಬಾರದು. ಕೆಲವು ವೇಳೆಗಳಲ್ಲಿ ಪ್ರಾಣಿಗಳಿಗೆ ನೋವನ್ನುಂಟುಮಾಡಬೇಕಾಗುವುದು. ನಮಗೇನಾದರೂ ರೋಗವು ಸಂಭವಿಸಿದರೆ ನಾವು ಪುನಃ ಸರಿಯಾದ ಸ್ಥಿತಿಗೆ ಬರುವುದಕ್ಕೋಸ್ಕರ ನಮಗೆ ನೋವನ್ನುಂಟುಮಾಡುವಂತಹ ಕಾರ್ಯವನ್ನೇನಾದರೂ ಮಾಡಬೇಕಾಗುವುದು. ನಾವು ನೋವನ್ನುಂಟುಮಾಡುವುದರಿಂದ ಪ್ರಾಣಿಗಳಿಗೆ ನಿಜವಾಗಿಯೂ ಒಳ್ಳೆಯದನ್ನು ಮಾಡುವುದಾದರೆ ಹಾಗೆ ಮಾಡಬಹುದು. ಅದು ಹೊರ್ತು ಆ ಪ್ರಾಣಿಯು ಹೇಗೆ ದುಃಖವನ್ನನುಭವಿಸುವುದು ಎಂಬ ವಿಚಾರದಲ್ಲಿ ಯೋಚನೆಮಾಡದಿರುವುದರಿಂದಲಾಗಲೀ, ಅದನ್ನು ಲಕ್ಷ್ಯಮಾಡದಿರುವುದರಿಂದಾಗಲೀ, ಪ್ರಾಣಿಗೆ ನೋವನ್ನು ಕೊಡಬಾರದು.

ಮಹಾತ್ಮನಾದ ಮನುವು "ಯಾರನ್ನು ನೋಡಿದರೆ ಯಾವ ಪ್ರಾಣಿಗಳಲ್ಲಿಯೂ ಭಯವು ಹುಟ್ಟುವುದಿಲ್ಲವೋ ಅಂಥವನು ಸತ್ತಾಗ

ಅವನಿಗೂ ಸಹ ಯಾವ ವಿಧವಾದ ಭಯವೂ ಇರುವುದಿಲ್ಲ.'' ಎಂದು ಹೇಳಿರುವನು.

ಯಾರಿಗೂ ಯಾವಾಗಲೂ ಹಿಂಸೆಯನ್ನು ಕೊಡದೆ ಇದ್ದ ಮಹಾತ್ಮರಾದ ಸಾಧುಗಳ ಮತ್ತು ಋಷಿಗಳ ಚರಿತ್ರೆಗಳು ನಮ್ಮ ಪರಿಶುದ್ಧವಾದ ಗ್ರಂಥಗಳಲ್ಲಿ ಅನೇಕವಿವೆ. ಯೋಗಿಯು ''ಸಕಲಪ್ರಾಣಿಗಳ ಸ್ನೇಹಿತನು.'' ಎಂಬ ಸುಂದರವಾದೊಂದು ಹೆಸರನ್ನು ಹೊಂದುತ್ತಾನೆ. ಕಾಡಿನಲ್ಲಿರುವ ಕ್ರೂರಮೃಗಗಳು ಅವನನ್ನು ಮುಟ್ಟುವುದಿಲ್ಲ. ವಿಷಭರಿತವಾದ ಸರ್ಪಗಳ ಮಧ್ಯದಲ್ಲಿ ನಿರ್ಭಯವಾಗಿ ಸಂಚಾರಮಾಡಬಲ್ಲನು. ಪಕ್ಷಿಗಳು ಬಂದು ಅವನ ಹೆಗಲಿನಮೇಲೆಯೇ ಕುಳಿತುಕೊಳ್ಳುವುವು. ಭೀತಿಯುಳ್ಳ ಜಿಂಕೆಯು ಅವನ ಕೈಯಿಂದ ಆಹಾರವನ್ನು ತೆಗೆದುಕೊಳ್ಳುವುದು.

ಸರ್ವಪ್ರಾಣಿಗಳ ಸ್ನೇಹಿತನು ಸಜೀವ ಪದಾರ್ಥಗಳ ವಿಷಯದಲ್ಲಿ ತನ್ನ ಹೃದಯದಲ್ಲಿ ಪ್ರೀತಿಯನ್ನು ಹೊಂದಿರುತ್ತಾನೆ. ಯಾವ ಮನುಷ್ಯನು ಸಮಸ್ತ ಪ್ರಾಣಿಗಳನ್ನೂ ತನ್ನಂತೆ ಭಾವಿಸುತ್ತಾನೆಯೋ ಯಾವನು ಹಿಂಸೆಮಾಡುವುದಿಲ್ಲವೋ, ಯಾವನು ಕೋಪವನ್ನು ತನ್ನಾಧೀನದಲ್ಲಿಟ್ಟುಕೊಂಡಿರುತ್ತಾನೆಯೋ ಅವನು ಇಹಪರಲೋಕಗಳೆರಡರಲ್ಲಿಯೂ ಅಧಿಕವಾದ ಸುಖವನ್ನನುಭವಿಸುತ್ತಾನೆ.

ಕಂದ॥ ಆವಂಪ್ರೀತಿಯೊಳೆಲ್ಲಾ ।
ಜೀವಂಗಳ ನೋಡುತಿರ್ಪನವನೇ ಭಕ್ತಂ ॥
ಓವಂ ನಮ್ಮೆಲ್ಲರನೀ ।
ದೇವಂ ಪ್ರೀತಿಯೊಳೆ ಸೃಜಿಸಿಪೊರೆಯುತಲಿರ್ಪಂ

ಮಹರ್ಷಿಗಳು ಮಾಡಿದಂತೆ ನಾವು ಮಾಡಲು ಶಕ್ತರಲ್ಲ. ಆದರೆ ನಮಗೆಲ್ಲರಿಗೂ ಸಾಧ್ಯವಾದುದೊಂದಿದೆ. ಈ ರೀತಿಯಲ್ಲಿ ಚಿಕ್ಕಮ

ಕ್ಕಳೂ ಮಹರ್ಷಿಗಳ ಮಾರ್ಗವನ್ನನುಸರಿಸಬಹುದು. ಯಾರಾದರೂ ನಮಗೆ ಕೆಡುಕನ್ನು ಮಾಡಿದರೆ ಅವರನ್ನು ಕ್ಷಮಿಸುವುದಕ್ಕೆ ಪ್ರಯತ್ನಿಸಲು ನಾವೆಲ್ಲರೂ ಶಕ್ತರಾಗಿರುತ್ತೇವೆ.

## "ಕ್ಷಮೆ. (Forgiveness.)

ಸಣ್ಣಮಕ್ಕಳು ಕೆಲವುವೇಳೆ ಒಬ್ಬರಮೇಲೊಬ್ಬರು ಕೋಪಮಾಡಿಕೊಳ್ಳುತ್ತಾರೆ. ಒಬ್ಬನು ಒಂದು ಆಟದಸಾಮಾನನ್ನಾಗಲೀ, ಒಂದು ಆಭರಣವನ್ನಾಗಲೀ ತೆಗೆದುಕೊಂಡು ಹೋದಾಗ ಇನ್ನೊಬ್ಬನು ಕೋಪದ ಮಾತುಗಳನ್ನಾಡುವನು. ಇಲ್ಲವೇ ಪ್ರತಿಯಾಗಿ ಏಟನ್ನು ಹೊಡೆಯುವನು. ಮಹಾತ್ಮರಾದ ಪೂರ್ವಿಕರು ನಮಗೆ ಹೇಳಿಕೊಟ್ಟಿರುವ ನಡತೆಯು ಇದೇಯೋ? ಓಹೋ ಇದಲ್ಲ. ತಮ್ಮನ್ನು ನೋಯಿಸಿದವರನ್ನು ತತ್‌ಕ್ಷಣವೇ ಕ್ಷಮಿಸಲು ಸಿದ್ಧರಾಗಿರುತ್ತಿದ್ದರು. ತಮಗೊಂದು ಕೆಡುಕನ್ನೊಬ್ಬರು ಮಾಡಿದರೆ ಅದಕ್ಕೆ ಪ್ರತಿಯಾಗಿ ಕೆಡುಕನ್ನು ಮಾಡುತ್ತಿರಲಿಲ್ಲ. ನಮ್ಮ ಪವಿತ್ರವಾದ ಗ್ರಂಥಗಳಲ್ಲಿ ನಮಗೆ ಕೆಡುಕನ್ನು ಮಾಡಿದವರನ್ನು ಕ್ಷಮಿಸಬೇಕೆಂಬ ವಿಷಯದಲ್ಲಿ ಅನೇಕ ಮಾತುಗಳಿರುವವು.

ಶ್ರೀಕೃಷ್ಣನು "ಯಾವ ಪ್ರಾಣಿಗಳಿಗೂ ಕೆಡುಕನ್ನು ಯೋಚಿಸದೆ ದಯಾಳುವಾಗಿಯೂ, ಕ್ಷಮಾಗುಣವುಳ್ಳವನಾಗಿಯೂ, ಇರುವ ಸ್ನೇಹಪರನಾದ ಮನುಷ್ಯನು ನನ್ನಪ್ರೀತಿಗೆ ಪಾತ್ರನಾಗಿರುವನು." ಎಂದು ಭಗವದ್ಗೀತೆಯಲ್ಲಿ ಹೇಳಿರುತ್ತಾನೆ.

ಸತ್ಪುರುಷರು ತಮಗೆ ಕೆಡುಕುಮಾಡಿದವರನ್ನು ಯಾವರೀತಿ ಕ್ಷಮಿಸುತ್ತಿದ್ದರೆಂಬ ವಿಷಯದಲ್ಲಿ ಅನೇಕ ಕಥೆಗಳಿವೆ. ಧೃತರಾಷ್ಟ್ರನ ತಮ್ಮನಾದ ವಿದುರನ ಚರಿತ್ರೆಯನ್ನು ನಿಮಗೆ ಹೇಳುವೆನು. ಈ ಧೃತರಾಷ್ಟ್ರನೆಂಬ ರಾಜನಿಗೆ ದುರ್ಯೋಧನನೆಂಬ ಮಗನಿದ್ದನು. ಅವನು

ಬಲು ಕೆಟ್ಟವನು. ಮತ್ತು ಬಹಳ ಕ್ರೂರಿಯು. ತನ್ನ ಚಿಕ್ಕಪ್ಪನ
ಮಕ್ಕಳಾದ ಪಾಂಡವರೊಡನೆ ಜಗಳವಾಡಿ ಅವರನ್ನು ಬಹಳ ಕ್ರೂರ
ವಾಗಿ ಕಾಣುತ್ತಿದ್ದನು. ಅವರಿಗೆ ಸೇರಿದ್ದರಾಜ್ಯವನ್ನು ಮೋಸದಿಂದ
ಕಿತ್ತುಕೊಂಡು ಅವರನ್ನು ಅರಣ್ಯಕ್ಕೆ ಓಡಿಸಿದನು.

ರಾಜನಾದ ಧೃತರಾಷ್ಟ್ರನು ಈ ವಿಷಯದಲ್ಲಿ ತಾನು ಏನು
ಮಾಡಬೇಕೆಂದು ತಮ್ಮನಾದ, ವಿದುರನನ್ನು ಕೇಳಿದನು. ವಿದುರನು
" ನಿನ್ನ ದಾಯಾದಿಗಳೊಡನೆ ಸಮಾಧಾನಮಾಡಿಕೊಂಡು ಅವರ
ರಾಜ್ಯವನ್ನು ಅವರಿಗೆ ಕೊಟ್ಟು ನೀನೂ ಮತ್ತು ನಿನ್ನ ಕಡೆಯವರೂ
ಕ್ಷಮಾಪಣೆಯನ್ನು ಕೇಳಿಕೊಳ್ಳಬೇಕೆಂದು ದುರ್ಯೋಧನನಿಗೆ ಹೇಳು "
ಎಂದು ಧೃತರಾಷ್ಟ್ರನಿಗೆ ಹೇಳಿದನು. ತನ್ನ ಮಗನನ್ನು ದೂಷಿಸಲು
ಧೃತರಾಷ್ಟ್ರನಿಗೆ ಇಷ್ಟವಿಲ್ಲದೆ ಈ ಮಾತನ್ನು ಹೇಳಿದ ತನ್ನತಮ್ಮನ
ಮೇಲೆ ಬಹಳವಾಗಿ ಕೋಪಿಸಿಕೊಂಡನು. ಮತ್ತು ಕ್ರೂರವಾದ ಮಾತು
ಗಳಿಂದ ವಿದುರನನ್ನು ಬೈದನು. ಹೀಗೆ ಧೃತರಾಷ್ಟ್ರನು ತನ್ನ ತಮ್ಮ
ನನ್ನು ನಿಂದಿಸಿ ಮನಸ್ಸಿನಲ್ಲಿ ಹೆಚ್ಚಾದ ಕೋಪವನ್ನಿಟ್ಟುಕೊಂಡು ಅಲ್ಲಿಂ
ದೆದ್ದು ಹೊರಟು ಹೋದನು. ವಿದುರನು ಕೋಪಿಸಿಕೊಳ್ಳಲೇಇಲ್ಲ.
ಇವನಿಗೆ ಹೆಚ್ಚಾದ ವ್ಯಸನವಾಯಿತು. ಆಮೇಲೆ ಇವನು ಪಾಂಡವರ
ಬಳಿಗೆ ಹೋಗಿ ಧೃತರಾಷ್ಟ್ರನ ಕೋಪವನ್ನು ಅವರಿಗೆ ತಿಳಿಸಿ " ನೀವು
ವಿವೇಕಿಗಳಾಗಿಯೂ, ಮೃದುವಾದ ಸ್ವಭಾವದವರಾಗಿಯೂ ಇರ
ಬೇಕು " ಎಂದು ಹೇಳಿ ಅವರ ಬಳಿಯಲ್ಲಿಯೇ ನಿಂತನು.

ವಿದುರನು ಹೊರಟುಹೋದ ಕೆಲವು ದಿವಸಗಳಮೇಲೆ ಧೃತರಾ
ಷ್ಟ್ರರಾಜನು ತನ್ನ ತಮ್ಮನಮೇಲೆ ಕೋಪಿಸಿಕೊಂಡು ಆಡಿದ ಮಾತು
ಗಳನ್ನು ನೆನಸಿಕೊಂಡು ಬಹಳ ವ್ಯಸನಪಟ್ಟನು. ಆಗ ತನ್ನ ಮಂತ್ರಿ
ಯನ್ನು ಕರೆದು " ಸಂಜಯನೇ, ನೀನು ಹೋಗಿ ನನ್ನ ತಮ್ಮನು
ಬದುಕಿರುವನೇ ನೋಡು. ನಾನು ನಿಷ್ಠುರವಾದ, ಮಾತುಗಳನ್ನಾಡಿ

ಅವನನ್ನು ಓಡಿಸಿದೆನು. ಅವನು ನನ್ನ ಮೇಲೆ ಯಾವಾಗಲೂ ಕೋಪಿಸಿಕೊಳ್ಳಲಿಲ್ಲ. ಅವನನ್ನು ಹುಡುಕಿ ನನ್ನಬಳಿಗೆ ಕರೆದುಕೊಂಡುಬಾ. ನಾನು ಕೆಟ್ಟಮಾತುಗಳಿಂದ ಅವನನ್ನು ಬೈದುದು ತಪ್ಪಾಯಿತು. ನನಗೀಗ ತುಂಬಾ ವ್ಯಸನವಾಗುತ್ತದೆ'' ಎಂದು ಹೇಳಿದನು.

ಅನಂತರದಲ್ಲಿ ಸಂಜಯನು ಪಾಂಡವರಿದ್ದ ಅರಣ್ಯಕ್ಕೆ ಹೋಗಿ ಅವರ ಬಳಿಯಲ್ಲಿದ್ದ ವಿದುರನನ್ನುಕಂಡನು. ವಿದುರನು ಧೃತರಾಷ್ಟ್ರನನ್ನು ಕ್ಷಮಿಸಿ ಪುನಃ ಅವನ ಬಳಿಗೆ ಹೋಗುವನೇ ಎಂಬ ವಿಷಯದಲ್ಲಿ ಸಂಜಯನು ಸಂದೇಹಪಡುತ್ತಿದ್ದನು. ಆದರೆ ವಿದುರನು ಸಂಜಯನನ್ನು ನೋಡಿದೊಡನೆಯೇ ಅವನಿಗೆ ಬಹಳ ಮರ್ಯಾದೆಯನ್ನುಮಾಡಿ ಪ್ರೀತಿಯಿಂದ ಕಂಡನು, ಆಮೇಲೆ ಸಂಜಯನು, ಧೃತರಾಷ್ಟ್ರನು ಹೇಳಿದ ಮಾತನ್ನು ಹೇಳಿ ತನ್ನಕೂಡ ಬರಬೇಕೆಂದು ವಿದುರನನ್ನು ಬೇಡಿಕೊಂಡನು.

ಆಗ ವಿದುರನು ಕೋಪಮಾಡಿದನೇ ? ಧೃತರಾಷ್ಟ್ರನಬಳಿಗೆ ಹೋಗಲು ತಿರಸ್ಕರಿಸಿದನೇ ? ಎಂದಿಗೂ ಇಲ್ಲ. ಜಾಗ್ರತೆಯಾಗಿ ತನ್ನ ಅಣ್ಣನಬಳಿಗೆಹೋಗಿ " ಎಲೈ ರಾಜನೇ ! ನಾನು ನಿನ್ನನ್ನು ಕ್ಷಮಿಸಿರುವೆನು. ನೀನು ನನ್ನ ಜ್ಯೇಷ್ಠಸಹೋದರನು. ನಿನ್ನಮುಖವನ್ನು ನೋಡಲಪೇಕ್ಷಿಸಿ ಜಾಗ್ರತೆಯಾಗಿ ಬಂದಿರುವೆನು. ಪಾಂಡವರು ಕಷ್ಟದಲ್ಲಿರುವುದರಿಂದ ಅವರಿಗೋಸ್ಕರ ನಾನು ಬಹಳ ದುಃಖಪಡುತ್ತೇನೆ. ಎಲೈ ರಾಜನೇ, ನಿನ್ನ ಮಕ್ಕಳೂಸಹ ನನ್ನಪ್ರೀತಿಗೆ ಪಾತ್ರರು.'' ಎಂದು ತನ್ನ ಅಣ್ಣನೊಡನೆ ಬಹಳ ನಮ್ರತೆಯಿಂದ ಮಾತನಾಡಿ ತನಗೆ ಮಾಡಿದ ಅಪಕಾರಗಳನ್ನೆಲ್ಲ ಸಂಪೂರ್ಣವಾಗಿ ಕ್ಷಮಿಸಿರುವುದನ್ನು ತೋರ್ಪಡಿಸಿದನು.

ಪಾಂಡವರು ತಾವು ಪುನಃ ರಾಜ್ಯಕ್ಕೆ ಬಂದಾಗ ಧೃತರಾಷ್ಟ್ರನ ವಿಷಯದಲ್ಲಿ ಯಾವ ರೀತಿಯಲ್ಲಿ ನಡೆಯುತ್ತಿದ್ದರೆಂಬುದನ್ನು ನಾವು

ಒದಗಬಹುದು. ವೃದ್ಧರಾಜನ ವಿಷಯದಲ್ಲಿ ಅವರೆಂದಿಗೂ ನಿಷ್ಕರುಣಿಗ ಳಾಗಿರಲಿಲ್ಲ. ಹದಿನೈದು ವರ್ಷಗಳವರೆಗೂ ಅವನ ಬುದ್ಧಿವಾದವನ್ನನು ಸರಿಸಿ ನಡೆಯುತ್ತಿದ್ದರು. ತಂದೆತಾಯಿಗಳಂತೆ ವೃದ್ಧರಾಜನನ್ನೂ, ಮತ್ತು ರಾಣಿಯನ್ನೂ ಸೇವಿಸುತ್ತಾ ಅವರಬಳಿಯಲ್ಲಿ ಕುಳಿತುಕೊಂಡು ಪ್ರೀತಿಯುಕ್ತವಾದ ಮಾತುಗಳನ್ನಾಡುತ್ತಾ ಭಕ್ತಿಯಿಂದ ಅವರಿಗೆ ನಮಸ್ಕರಿಸುತ್ತಾ ಉಪಚರಿಸುತ್ತಿದ್ದರು. ಪಾಂಡವರಲ್ಲಿ ಜ್ಯೇಷ್ಠನಾದ ಯುಧಿಷ್ಟಿರನು ತನ್ನ ತಮ್ಮಂದಿರನ್ನು ಕರೆದು, "ಧೃತರಾಷ್ಟ್ರನು ತನ್ನ ಮಕ್ಕಳನ್ನೆಲ್ಲಾ ಕಳೆದುಕೊಂಡು ದುಃಖಪಡುತ್ತಿರುವನು. ಇವ ನನ್ನು ಯಾವರೀತಿಯಲ್ಲೂ ನೋಯಿಸದೆ ನೋಡಿಕೊಂಡಿರಿ." ಎಂದು ಹೇಳುತ್ತಿದ್ದನು. ಯುಧಿಷ್ಟಿರನ ಈ ಮಾತುಗಳನ್ನು ಕೇಳಿ ಅವನ ಸಹೋದರರು ವೃದ್ಧರಾಜನ ವಿಷಯದಲ್ಲಿ ಅತ್ಯಂತ ವಿಧೇಯರಾಗಿದ್ದರು. ಅವರೆಲ್ಲರೂ ತಮಗೆ ಧೃತರಾಷ್ಟ್ರನಿಂದುಂಟಾದ ಬಹಳ ದಿವಸಗಳ ಅರಣ್ಯವಾಸವನ್ನೂ, ಅವನಿಂದ ತಮಗೆ ಸಂಭವಿಸಿದ ಸಮಸ್ತ ತೊಂದ ರೆಗಳನ್ನೂ, ದುಃಖವನ್ನೂ ಕ್ಷಮಿಸಿದರು. ಅವನವಿಷಯದಲ್ಲಿ ಪಾಂಡ ವರಿಗೆ ಯಾವ ದುರಾಲೋಚನೆಯೂ ಇರಲಿಲ್ಲ. ಆದರೆ ಅವರೊಳಗೆ ಕ್ಷಮಿಸಲಾರದವನೊಬ್ಬನಿದ್ದನು. ಅವನೇ ಭೀಮಸೇನನು. ತನ್ನಕೋ ಪವನ್ನಿಟ್ಟುಕೊಂಡಿದ್ದವನು ಅವನೇ. ಯುಧಿಷ್ಟಿರನೂ, ಅರ್ಜುನನೂ ಸಹ ಸಜ್ಜನರು. ಅವರು ತಮಗುಂಟಾದ ಉಪಕಾರಗಳನ್ನು ಹೊರತು ಅಪಕಾರಗಳನ್ನು ನೆನಪಿನಲ್ಲಿಡಬಾರದೆಂದು ಅವನಿಗೆ ಹೇಳುತ್ತಿದ್ದರು. ಆದರೂ ಭೀಮಸೇನನು ತನ್ನ ಕೋಪವನ್ನು ತನ್ನಧೀನದಲ್ಲಿಟ್ಟುಕೊಳ್ಳ ಲಾರದೆ ಹೋದನು. ವೃದ್ಧರಾಜನ ವಿಷಯದಲ್ಲಿ ಕ್ರೂರವಾಗಿಯೇ ನಡೆ ಯುತ್ತಿದ್ದನು. ಕೊನೆಗೆ ಧೃತರಾಷ್ಟ್ರನು ಬಹಳ ದುಃಖವನ್ನುಹೊಂದಿ ರಾಜ್ಯವನ್ನು ತ್ಯಜಿಸಿ ಅರಣ್ಯಕ್ಕೆ ಹೊರಡಬೇಕೆಂದು ನಿರ್ಧರಿಸಿದನು. ಆದರೆ ಯುಧಿಷ್ಟಿರನು ವೃದ್ಧರಾಜನನ್ನು ಪ್ರೀತಿಸುತ್ತಿದ್ದನು. ಆದುದ

ರಿಂದ ಅವನು "ಎಲೈ ಕೌರವರಿಗೆಲ್ಲಾ ರಾಜನಾದವನೇ, ನೀನು ನನ್ನನ್ನು ಬಿಟ್ಟು ಕಾಡಿಗೆ ಹೋದರೆ ನಾನೂ ನಿನ್ನನ್ನು ಹಿಂಬಾಲಿಸುವೆನು. ನಿನ್ನ ಸೇವೆಯನ್ನು ಮಾಡುವುದರಿಂದಲೂ, ನಿನ್ನ ಆಜ್ಞೆಗಳಂತೆ ನಡೆಯುವುದರಿಂದಲೂ, ನಿನ್ನ ಮನಸ್ಸಿನ ದುಃಖವನ್ನು ಬಿಡಿಸಬಹುದೆಂದು ಯೋಚಿಸಿದ್ದೆನು." ಎಂದು ಹೇಳಿದನು. ಈ ರೀತಿಯಲ್ಲಿ ಯುಧಿಷ್ಠಿರನು ತನಗೆ ಮಾಡಿದ ಅಪಕಾರಗಳನ್ನೆಲ್ಲಾ ಮರೆತು ಎಷ್ಟು ಕ್ಷಮಾಗುಣವನ್ನು ತೋರಿಸಿದನು! ಅವನಲ್ಲಿ ಕ್ಷಮೆಯು ಸಂಪೂರ್ಣವಾಗಿದ್ದಿತು. ಆದುದರಿಂದಲೇ ಧೃತರಾಷ್ಟ್ರನು ಅವನನ್ನು ಪ್ರೀತಿಯಿಂದ ಕಾಣುತ್ತಿದ್ದನು.

ಈ ಚರಿತ್ರೆಯಿಂದ ನಮಗೆ ಅಪಕಾರಮಾಡಿದವರನ್ನು ಕ್ಷಮಿಸಬೇಕೆಂಬುದನ್ನು ಕಲಿಯಬೇಕು. ನಿಷ್ಕರುಣವುಳ್ಳ ಮಾತುಗಳನ್ನಾಡುವುದಕ್ಕೆ ಬದಲಾಗಿ ಕೋಪವಿಲ್ಲದೆ ನಮ್ರತೆಯಿಂದ ಮಾತುಗಳನ್ನಾಡೋಣ.



## " ಶಮ. " (Control of Anger)

"ಕೋಪಿಷ್ಟನಾದ ಮನುಷ್ಯನು ಮಾಡದ ಕೆಲಸವೂ ಆಡದ ಮಾತೂ ಇಲ್ಲವೇ ಇಲ್ಲ. ಕೋಪಿಷ್ಟನು ನಿಷ್ಠುರವಾದ ಮಾತುಗಳಿಂದ ಹಿರಿಯರನ್ನು ಅವಮಾನಪಡಿಸುವನು. ಜ್ಞಾನಿಗಳು ತಮ್ಮ ಕೋಪವನ್ನು ಜಯಿಸುವರು. ಸತ್ವವಂತನಾದ ಕ್ಷಮಾಗುಣವುಳ್ಳ ಮನುಷ್ಯನು ಯಾವಾಗಲೂ ಜಯಶಾಲಿಯಾಗಿರುವನು."

"ಸಜ್ಜನರಾದವರು ತಮ್ಮ ಶತೃಗಳಲ್ಲಿಯೂ ಕೂಡ ಅವರು ಮಾಡಿದ ಸತ್ಕಾರ್ಯಗಳನ್ನು ಮಾತ್ರ ಜ್ಞಾಪಕದಲ್ಲಿಟ್ಟುಕೊಳ್ಳುವರು. ಅವರು ತಮಗೆ ಮಾಡಿದ ಕ್ರೂರವಾದ ತೊಂದರೆಗಳನ್ನು ನೆನಪಿನಲ್ಲಿಡುವುದೇ ಇಲ್ಲ. ಇದಲ್ಲದೆ ಸತ್ಪುರುಷರು ಪ್ರತ್ಯುಪಕಾರವನ್ನು ಬಯಸದೆ ಇತರರಿಗೆ ಉಪಕಾರವನ್ನು ಮಾಡುತ್ತಿರುವರು."

ಶ್ರೀರಾಮನು ಚಿತ್ರಕೂಟಪರ್ವತದಲ್ಲಿ ವಾಸಮಾಡುತ್ತಿರುವಾಗ ಬಹುದೂರದಲ್ಲಿ ಬರುತ್ತಿದ್ದ ಸೈನ್ಯದ ಶಬ್ದವನ್ನು ಕೇಳಿದನು. ಕೂಡಲೇ ಲಕ್ಷ್ಮಣನನ್ನು ಕರೆದು "ಓ ಲಕ್ಷ್ಮಣನೇ, ಆ ಎತ್ತರವಾದ ಮರವನ್ನು ಹತ್ತಿ ಯಾರು ಬರುತ್ತಿರುವರೆಂಬುದನ್ನು ನೋಡು;" ಎಂದು ಹೇಳಿದನು. ಆಗ ಲಕ್ಷ್ಮಣನು ಮರವನ್ನು ಹತ್ತಿನೋಡಿ ದೊಡ್ಡ ಸೈನ್ಯದೊಡನೆ ಭರತನು ಬರುತ್ತಿರುವುದನ್ನು ಕಂಡು ತಟ್ಟನೆ ಮರದಿಂದಿಳಿದು "ಎಲೈ ಅಣ್ಣನೆ, ನಿನ್ನತಮ್ಮನಾದ ಭರತನು ನಮ್ಮನ್ನು ಕೊಲ್ಲುವುದಕ್ಕಾಗಿ ಬರುತ್ತಿರುವನು. ನಾವು ಯುದ್ಧಕ್ಕೆ ಸಿದ್ಧರಾಗಬೇಕೆಂದು ಕೋಪದಿಂದ ಗಟ್ಟಿಯಾಗಿ ಕೂಗಿಕೊಂಡನು. ಇದನ್ನು ಕೇಳಿ ರಾಮಚಂದ್ರನು ಮಂದಹಾಸಯುಕ್ತನಾಗಿ, ಲಕ್ಷ್ಮಣನೇ, ಹಾಗಲ್ಲ, ಹಾಗಲ್ಲ. ನಮ್ಮ ಸಹೋದರನಾದ ಭರತನಿಗೆ ಇಂತಹ ಕೆಡುಕು ಬುದ್ಧಿಯು ಎಂದಿಗೂ ಇಲ್ಲ. 'ನಿನ್ನ ರಾಜ್ಯವನ್ನು ಲಕ್ಷ್ಮಣನಿಗೆ ಕೊಡು' ಎಂದು ನಾನು ಹೇಳಿದರೆ, 'ಆಗಲಿ' ಎಂದು ತತ್ಕ್ಷಣವೇ ಕೊಟ್ಟು ಬಿಡುವನು ಎಂದು ಹೇಳಿದನು.

ಆಮೇಲೆ ಲಕ್ಷ್ಮಣನ ಕೋಪವು ಸಮಾಧಾನವಾಯಿತು ಮತ್ತು ಆಗ ಬಂದ ಭರತನನ್ನು ಪ್ರೀತಿಯಿಂದ ಕಂಡನು. ಎಲ್ಲವೂ ಸಮಾಧಾನ ಸ್ಥಿತಿಯಲ್ಲಿಯೇ ಇದ್ದಿತು.

ಬಹಳ ಕೋಪಸ್ವಭಾವವುಳ್ಳ ಭೀಮಸೇನನು ತನ್ನ ಅಣ್ಣನಮೇಲೆ ಬಹಳವಾಗಿ ಕೋಪಿಸಿಕೊಂಡು "ನೀನು ಜೂಜಾಡಿ ನಮ್ಮ ರಾಜ್ಯವನ್ನೆಲ್ಲಾ ಸೋತೆ. ನಮ್ಮ ಐಶ್ವರ್ಯವನ್ನೆಲ್ಲಾ ಹಾಳುಮಾಡಿದೆ. ನಾವೆಲ್ಲರೂ ದೇಶಭ್ರಷ್ಟರಾಗಬೇಕಾಯ್ತು. ಈಗ ಜೂಜುಗಾರರಿಗೆ ಕೊಟ್ಟ ಭಾಷೆಯನ್ನು ಪರಿಪಾಲಿಸುವುದಕ್ಕಾಗಿ ಹೇಡಿಯಂತೆ ನಟಿಸಿ ಕ್ಷಾತ್ರಧರ್ಮವನ್ನು ತ್ಯಜಿಸಿರುವೆ. ಒಳ್ಳೆಯ ಅಣ್ಣ!" ಎಂದು ಹಿಯ್ಯಾಳಿಸಿದನು. ಈ ಮಾತನ್ನು ಕೇಳಿ ಯುಧಿಷ್ಠಿರನು ಬಹಳ ದುಃಖಪಟ್ಟನು.

ಮತ್ತು ತಾನು ಎಲ್ಲಿ ಕೋಪಿಸಿಕೊಂಡು ಉತ್ತರಕೊಡಬೇಕಾಗುವುದೋ ಎಂಬ ಭಯದಿಂದ ಕೆಲವು ನಿಮಿಷಗಳವರೆಗೆ ಮಾತನಾಡದೆ ಸುಮ್ಮನಿದ್ದನು. ಆಮೇಲೆ ಅವನು ಬಹಳ ಮೃದುವಾಗಿ "ಓ ಪ್ರಿಯಸಹೋದರನಾದ ಭೀಮನೇ, ನೀನು ಸತ್ಯವನ್ನಾಡಿದೆ. ದುರದೃಷ್ಟಗಳೆಲ್ಲವೂ ನನ್ನ ತಪ್ಪಿತವಾಗಿವೆ. ಆದುದರಿಂದ ನಿನ್ನ ಕೋಪವನ್ನು ನಾನು ದೂಷಿಸಲಾರೆನು. ಆದರೂ ನನ್ನನ್ನು ಕ್ಷಮಿಸು. ದಯೆಯಿಲ್ಲದ ಮಾತುಗಳನ್ನಾಡಬೇಡ. ನಿನ್ನನ್ನು ಸಂತೋಷಪಡಿಸುವುದಕ್ಕಾಗಿ ನನ್ನ ಪ್ರತಿಜ್ಞೆಯನ್ನು ಮೀರಲಾರೆನು. ಸ್ವಲ್ಪ ನಿದಾನಿಸು. ಉತ್ತಮವಾದ ಕಾಲವು ಬರುವುದು." ಎಂದು ಹೇಳಿದನು. ಅನಂತರದಲ್ಲಿ ಭೀಮನು ನಾಚಿಕೆಯಿಂದ ತನ್ನಣ್ಣನ ಕಾಲುಗಳನ್ನು ಹಿಡಿದುಕೊಂಡನು. ಜಗಳವೇನೂ ಇರಲಿಲ್ಲ.

ಕಂ ||

ಹಿತವನುಡಿಫಲವಹುದುಸ |<br>
ನ್ಮತಿಯಿಂ ಭಯಗೊಳಿಸದಾಳೆನೀಂದಯೆಯಿಂದಂ ||<br>
ಹಿತವನುಡಿದುಷ್ಟವಾಕ್ಯಗ |<br>
ಳತಿಹಿತದಿಂದೆಸಪಕಾರ್ಯಮಂಕಿಡಿಸದಿರಲ್ ||

---

## ಅತಿಥಿಸತ್ಕಾರ (Hospitality)

ದಯೆ, ಅಹಿಂಸೆ, ಕ್ಷಮೆ, ಎಂಬ ಸದ್ಗುಣಗಳಲ್ಲದೆ ಇನ್ನೂ ನಾವು ಅಭ್ಯಾಸಮಾಡಬೇಕಾದ ಸುಗುಣಗಳನೇಕವಾಗಿವೆ. ಒಬ್ಬ ಅತಿಥಿಯು ನಮ್ಮ ಮನೆಗೆ ಬಂದಾಗ ನಾವು ಅವನಿಗೆ ಆಹಾರವನ್ನು ಕೊಡಬೇಕು. ಇದೇ ಅತಿಥಿಸತ್ಕಾರವೆನಿಸಿಕೊಳ್ಳುವುದು. ತನ್ನ ಮನೆಗೆ ಬಂದವನಿಗೆ ಆಹಾರವನ್ನು ಕೊಟ್ಟು ಸೇವೆಮಾಡುವುದೇ ಅತಿಥಿಸತ್ಕಾರವೆಂಬ ಶಬ್ದದ

ಅರ್ಥವು. ನಮ್ಮ ಮನೆಗೆ ಬಂದ ಅತಿಥಿಗೆ ಅನ್ನವನ್ನು ಹಾಕಿದಹೊರ್ತು ನಾವು ಊಟಮಾಡಬಾರದು. ಅತಿಥಿಯನ್ನು ಪ್ರೀತಿಯಿಂದ ಕರೆತಂದು ಆಹಾರವನ್ನೂ, ಆಶ್ರಯವನ್ನೂ ಕೊಟ್ಟವನೆ ಮಹಾತ್ಮನಾದ ಮನುವಿನ ಬೋಧನೆಯಂತೆ ನಡೆದವನಾಗುತ್ತಾನೆ.

ರಂತಿದೇವನು ತನ್ನ ಬಳಿಗೆ ಬಂದವರಿಗೆ ಹೇಗೆ ದಾನಮಾಡುತ್ತಿದ್ದನೆಂಬುದನ್ನು ನೀವು ಜ್ಞಾಪಕದಲ್ಲಿಟ್ಟಿರುವಿರಿ. ಇದಲ್ಲದೆ ಪುರಾತನ ಕಾಲದಲ್ಲಿ ಆರ್ಯರು ಯಾವಾಗಲೂ ಅತಿಥಿಸತ್ಕಾರ ಧರ್ಮವನ್ನು ಆಚರಿಸುತಿದ್ದರೆಂಬುದನ್ನು ತೋರಿಸತಕ್ಕ ಕಥೆಗಳು ನಮ್ಮ ಗ್ರಂಥಗಳಲ್ಲನೇಕವಾಗಿವೆ.

ಒಂದಾನೊಂದು ಕಾಲದಲ್ಲಿ ಯುಧಿಷ್ಟಿರನು ಒಂದು ಮಹಾಯಜ್ಞವನ್ನು ಮಾಡಿದನು. ಆ ಯಜ್ಞದಲ್ಲಿ ಉಪಯೋಗಿಸುತ್ತಿದ್ದ ಪಾತ್ರೆಗಳೆಲ್ಲವೂ ಚಿನ್ನದಿಂದಲೇ ಮಾಡಲ್ಪಟ್ಟಿದ್ದುವು. ಬಹಳ ಸುಂದರವಾದ ಆ ಸ್ಥಳದಲ್ಲಿ ಅನೇಕ ಜನರು ನೆರೆದಿದ್ದರು.

ಅಲ್ಲಿಗೆ ಅರ್ಧಶರೀರವೆಲ್ಲಾ ಭಂಗಾರವಾಗಿದ್ದ ಒಂದು ಚಿಕ್ಕ ಮುಂಗಸಿಯು ಬಂದಿತ್ತು. ಅಲ್ಲಿದ್ದ ಜನರು ಇದನ್ನು ನೋಡಿ ನಿನ್ನ ಅರ್ಧ ಶರೀರವು ಚಿನ್ನವಾಗುವುದಕ್ಕೆ ಕಾರಣವೇನೆಂದು ಈ ಮುಂಗಸಿಯನ್ನು ಕೇಳಿದರು. ಆಗ ಮುಂಗಸಿಯು "ಎಲೈ ಜನರೇ ಕೇಳಿ; ಇಲ್ಲಿರುವ ಸಮಸ್ತ ಭಂಗಾರವೂ, ರತ್ನವೂ, ಹಣವೂ ಒಂದುಸೇರು ಅಕ್ಕಿಯಹಿಟ್ಟಿಗೆ ಸಮವಾಗಲಾರದು" ಎಂದೊಂದು ಕಥೆಯನ್ನು ಹೇಳುವುದಕ್ಕೆ ಪ್ರಾರಂಭಿಸಿತು:—

ಪೂರ್ವದಲ್ಲಿ ಹೊಲದಲ್ಲಿ ಬಿದ್ದಿದ್ದ ಕಾಳುಗಳನ್ನಾಯ್ದು ತಂದು ಮಾಡಿದ ಆಹಾರವನ್ನೇ ತಿನ್ನುತ್ತಿದ್ದ ಒಬ್ಬ ಬ್ರಾಹ್ಮಣನಿದ್ದನು. ಈ ಬ್ರಾಹ್ಮಣನಿಗೆ ಒಬ್ಬ ಹೆಂಡತಿಯೂ, ಒಬ್ಬ ಮಗನೂ, ಒಬ್ಬಳು ಸೊಸೆಯೂ ಸಹ ಇದ್ದರು. ಹೀಗಿರುವಲ್ಲಿ ಒಂದುವರುಷ ದೊಡ್ಡಕ್ಷಾಮವು

ಬಂದಿತು. ಭೂಮಿಯಲ್ಲಿ ಬೆಳೆಯಾಗಲಿಲ್ಲ. ಆ ಬ್ರಾಹ್ಮಣನು ಭೂಮಿಯಲ್ಲಿ ಬಿದ್ದಿದ್ದ ಕಾಳುಗಳನ್ನು ಒಂದನ್ನೂ ಬಿಡದೆ ಆರಿಸಿ ಒಟ್ಟುಗೂಡಿಸಿದರೆ ಅವನಿಗೂ ಅವನ ಸಂಸಾರಕ್ಕೂ ಒಂದುಹೊತ್ತಿನ ಅರ್ಧಹೊಟ್ಟೆಯ ಆಹಾರಕ್ಕೂ ಸಾಲದ ಹಾಗಿದ್ದಿತು. ಆದುದರಿಂದ ಅವರು ದಿನೇ ದಿನೇ ಕೃಶರಾಗುತ್ತಾ ಬಂದರು. ಕೊನೆಗೆ ಅವರ ದೇಹದಲ್ಲಿ ಮೂಳೆಚರ್ಮಗಳು ಮಾತ್ರ ಉಳಿದವು.

ಹೀಗಿರುವಲ್ಲಿ ಒಂದುದಿನ ಆ ಬ್ರಾಹ್ಮಣನಿಗೆ ಎಲ್ಲಿಯೋ ಸ್ವಲ್ಪ ಅಕ್ಕಿಸಿಕ್ಕಿತು. ಆತನ ಹೆಂಡತಿಯು ಅದನ್ನು ಬೀಸಿ ಹಿಟ್ಟುಮಾಡಿ ಎಲ್ಲರಿಗೂ ಒಂದೊಂದು ಮುದ್ದೆಯು ಬರುವಂತೆ ನಾಲ್ಕುಭಾಗಗಳನ್ನು ಮಾಡಿದಳು. ಹೇಗಾದರೂ ಆಗಲಿ ಸ್ವಲ್ಪ ಆಹಾರವು ಸಿಕ್ಕಿತಲ್ಲ ಎಂದು ಅವರೆಲ್ಲರೂ ಸಂತೋಷದಿಂದ ತಿನ್ನುವುದಕ್ಕೆ ಕುಳಿತರು.

ಅವರು ತಿನ್ನುವುದಕ್ಕೆ ಪ್ರಾರಂಭಿಸುವಷ್ಟರಲ್ಲಿಯೇ ಒಬ್ಬ ಅತಿಥಿಯುಬಂದು ಬಾಗಿಲಲ್ಲಿ ನಿಂತನು. ತತ್ಕ್ಷಣವೇ ಬ್ರಾಹ್ಮಣನು ಎದ್ದು ಆ ಅತಿಥಿಯನ್ನು ಒಳಕ್ಕೆ ಕರೆದುಕೊಂಡುಬಂದು ಕೈಕಾಲುಗಳನ್ನು ತೊಳೆದುಕೊಳ್ಳುವುದಕ್ಕೆ ನೀರನ್ನುಕೊಟ್ಟು ಮಣೆಯಮೇಲೆ ಕುಳ್ಳಿರಿಸಿದನು. ಆಮೇಲೆ ಅತಿಥಿಯ ಮುಂದುಗಡೆಯಲ್ಲಿ ತನ್ನ ಪಾಲಿಗೆಬಂದ ಹಿಟ್ಟನ್ನು ಇಟ್ಟನು. ಅವನು ಅದನ್ನು ತಿಂದನು. ಅದು ಬಹಳ ಸ್ವಲ್ಪವಾದ ಆಹಾರವಾದುದರಿಂದ ಅತಿಥಿಗೆ ತೃಪ್ತಿಯಾಗಲಿಲ್ಲ. ಇದನ್ನು ನೋಡಿ ಆ ಬ್ರಾಹ್ಮಣನ ಹೆಂಡತಿಯು ತನ್ನ ಪಾಲಿಗೆಬಂದ ಹಿಟ್ಟನ್ನು ಅತಿಥಿಗೆ ಕೊಡುವುದಕ್ಕಾಗಿ ತನ್ನ ಪತಿಯಕೈಗೆ ಕೊಟ್ಟಳು. ಬ್ರಾಹ್ಮಣನಿಗೆ ಅದನ್ನು ತೆಗೆದುಕೊಳ್ಳಲು ಇಷ್ಟವಿರಲಿಲ್ಲ. ಅವನು ತನ್ನ ಹೆಂಡತಿಯು ಆಹಾರವಿಲ್ಲದೆ ಎಷ್ಟು ಬಲಹೀನಳಾಗಿರುವಳೆಂಬುದನ್ನು ನೋಡಿದ್ದನು. ಆದುದರಿಂದ ನಿನ್ನ ಆಹಾರವನ್ನು ನೀನೇ ತಿನ್ನು ಎಂದು ಆಕೆಗೆ ಹೇಳಿದರೂ ಆಕೆಯು ನನ್ನಮನೆಗೆ ಬಂದ ಅತಿಥಿಯು ಹಸಿದಿರುವುದು

ನನ್ನ ಮನಸ್ಸಿಗೆ ಒಪ್ಪುವದಿಲ್ಲವೆಂದು ಹೇಳಿದಳು. ಆದುದರಿಂದ ಅತಿಥಿಯು ಆಕೆಯ ಭಾಗವನ್ನೂ ತಿಂದುಬಿಟ್ಟನು. ಆದರೂ ಅವನ ಹಸಿವು ತೀರಲಿಲ್ಲ. ಇನ್ನೂ ಅವನಿಗೆ ಆಹಾರವು ಬೇಕಾಗಿದ್ದಿತು. ಇದನ್ನು ಆ ಬ್ರಾಹ್ಮಣನ ಮಗನುಕಂಡು ತನ್ನಪಾಲಿನ ಹಿಟ್ಟಿನಮುದ್ದೆಯನ್ನುತಂದು ಕೊಟ್ಟನು. ಮಗನ ಹಸಿವನ್ನುನೋಡಿ ಬ್ರಾಹ್ಮಣನಿಗೆ ಬಹಳ ದುಃಖ ವಾಯ್ತು. ಆದರೂ ಅವನ ಭಾಗವನ್ನೂ ಅತಿಥಿಗೆ ಕೊಟ್ಟನು. ಅಯ್ಯೊ! ಇಷ್ಟಾದರೂ ಆ ಅತಿಥಿಯ ಹಸುವಿಂಗಲಿಲ್ಲವಲ್ಲ! ಆಮೇಲೆ ಆ ಬ್ರಾಹ್ಮಣನ ಸೊಸೆಯು ಆ ಅತಿಥಿಯ ಸ್ಥಿತಿಯನ್ನುನೋಡಿ ತನ್ನಪಾಲಿನ ಹಿಟ್ಟನ್ನೂ ತಂದು ಅತಿಥಿಗೆ ಕೊಡೆಂದು ಬ್ರಾಹ್ಮಣನಮುಂದೆ ಹಿಡಿದಳು. ಆಕೆಯು ಬಹಳ ಚಿಕ್ಕವಯಸ್ಸಿನವಳಾಗಿಯೂ, ಬಲಹೀನಳಾಗಿಯೂ ಇದ್ದುದರಿಂದ ಬ್ರಾಹ್ಮಣನು "ಮಗುವೇ, ನಿನ್ನದುಬೇಡ, ನಿನ್ನದು ಬೇಡ'' ಎಂದು ಹೇಳಿದನು. ಆಗ ಆಕೆಯು, "ಓ ಮಾವನೇ, ನೀನು ಮಾಡುವ ಸತ್ಕಾರ್ಯದಲ್ಲಿ ನನಗೂ ಒಂದು ಭಾಗವು ಬರಲಿ. ಅತಿಥಿಯನ್ನು ಯಾವಾಗಲೂ ದೇವರಂತೆ ಭಾವಿಸಬೇಕು. ಈ ನನ್ನ ಆಹಾರವನ್ನು ಅತಿಥಿಗೆ ಕೊಡು.'' ಎಂದು ಹೇಳಿದಳು. ಆದುದರಿಂದ ಬ್ರಾಹ್ಮಣನು ಅದನ್ನೂ ತೆಗೆದುಕೊಂಡು ಅತಿಥಿಗೆ ಕೊಟ್ಟನು. ಅತಿಥಿಯು ಇದನ್ನೂ ತಿಂದನು. ಇಷ್ಟಕ್ಕೆ ಆ ಅತಿಥಿಯು ತೃಪ್ತನಾದನು.

ಆಮೇಲೆ ಅವನ ಸುತ್ತಲೂ ಒಂದು ಪ್ರಕಾಶಮಾನವಾದ ಬೆಳಕುಶೋಭಿಸಿತು. ನಿಜವಾಗಿ ಅವನು ದೇವನೆಂದು ಅವರು ತಿಳಿದುಕೊಂಡರು. ಆತನು ಪ್ರಕಾಶಮಾನನಾಗಿಯೂ, ಸುಂದರನಾಗಿಯೂ ಅವರಮುಂದೆ ನಿಂತನು. ಆಗ ಅವರೆಲ್ಲರೂ ಸಂತೋಷಪಟ್ಟರು. ನಾನು ಆ ಅತಿಥಿಯು ತಿನ್ನುವಾಗ ನೆಲದಮೇಲೆ ಬಿದ್ದಿದ್ದ ಹಿಟ್ಟಿನ ಸಣ್ಣಸಣ್ಣ ಚೂರುಗಳ ಮೇಲೆ ಬಿದ್ದು ಹೊರಳಿದೆನು. ನನ್ನ ಅರ್ಧಶರೀರವು ಚಿನ್ನವಾಯಿತು. ಎಂದು ಮುಂಗಸಿಯು ಹೇಳಿತು. ಈ ಕಥೆಯನ್ನು ಕೇಳಿ

ಅಲ್ಲಿದ್ದ ಜನರೆಲ್ಲರೂ ಅತಿಥಿಸತ್ಕಾರವು ಎಂತಹ ಒಳ್ಳೆಯ ಗುಣವೆಂದು ಆಶ್ಚರ್ಯಪಟ್ಟರು.

ಹುಡುಗರೇ ಅತಿಥಿಸತ್ಕಾರದ ಮಹಿಮೆಯನ್ನು ನೋಡಿದಿರಾ. ಮುಂಗಸಿಯ ಮೈಯ್ಯನ್ನು ಚಿನ್ನವನ್ನಾಗಿ ಮಾಡಿತು.

---

## ಬಡವರಿಗೆ ಆಹಾರವನ್ನು ಕೊಡು (Feed the poor.)

ಸದ್ಗುಣದಿಂದ ಮಾತ್ರ ಸಂಪಾದಿಸಬಹುದಾದ ಅತಿಶಯವಾದ ಫಲವನ್ನು ಹೊಂದಬೇಕಾದರೆ ಉಪಕಾರಕ್ಕೆ ಬದಲಾಗಿ ಉಪಕಾರಮಾಡುವಂಥವನಲ್ಲಿ ನಿನ್ನ ಹಣವನ್ನು ಖರ್ಚುಮಾಡಬೇಡ.

2 ಐಶ್ವರ್ಯವಂತರಲ್ಲಿ ನಿನ್ನ ಹಣವನ್ನು ಭಾಗಮಾಡಿಕೊಳ್ಳಬೇಡ.

3 ಆವಶ್ಯಕವಿದ್ದವರಿಗೆ ಸಹಾಯಮಾಡು.

4 ನೀನು ಉಳಿಸಬಹುದಾದ ಹಣದಿಂದ ಬಡವರಿಗೂ ಹಸಿದವರಿಗೂ ಭೋಜನವನ್ನು ಮಾಡಿಸು.

5 ನಿನ್ನಿಂದ ಸಹಾಯವನ್ನು ಹೊಂದುವವರು ಪಾತ್ರರಾಗಿಯೂ ನಿನ್ನ ರಕ್ಷಣೆಯನ್ನು ಬೇಡುವವರಾಗಿಯೂ ಇರುತ್ತಾರೆಂಬುದನ್ನು ಖಂಡಿತಮಾಡಿಕೋ.

6 ಉಪಕಾರಮಾಡುವುದಕ್ಕೆ ಮೊದಲು ಹೇಗೆ, ಯಾವಾಗ, ಎಲ್ಲಿ, ಎಂಬುದನ್ನು ಆಲೋಚಿಸು.

## ಕೈಂಕರ್ಯ. (Service.)

ಪ್ರತಿಯೊಬ್ಬನೂ ಪರರ ಸೇವೆಗೋಸ್ಕರ ತನ್ನ ದೃಷ್ಟಿಯನ್ನೂ, ಹೃದಯವನ್ನೂ ಸಮರ್ಪಿಸಬೇಕು. ಪ್ರತಿಯೊಬ್ಬನೂ ತನ್ನ ಅತಿಥಿಯನ್ನು ಉಪಚರಿಸಬೇಕು.

ಕಂ ॥ ಅತ್ಯಲ್ಪಮಾದಶಕ್ತಿಯ |
ನತ್ಯಲ್ಪಮಾದರಿವನುರೆ ಪಡೆದುಂಬಾಲಂ ॥
ಅತ್ಯಧಿಕಮಾದ ದಯೆಯಿಂ |
ದತ್ಯಧಿಕಮೊಳುಪಕೃತಿಯಮಾಡಲ್ಲಕ್ಷಂ ॥
ಇತರರಿಗುಪಕೃತಿಗಳ ನಾ |
ನತಿಹಿತದಿಂದೆನಿತಮಾಡಲಹುದೆಂದರಿಯಲ್ ॥
ಕತಿಪಯ ಶಕ್ತಿಗಳಿಂದಂ |
ಮತಿಯೊಳಿಹಾಚಾರ್ಯವೊಂದೆಯಾವಶ್ಯಕವೈ ॥

---

## ಸಹೋದರರಲ್ಲಿ ಪ್ರೀತಿ. (Brotherly love.)

ಒಡಹುಟ್ಟಿದವರಲ್ಲಿ ದೊಡ್ಡವರು ಚಿಕ್ಕವರಲ್ಲಿಟ್ಟುಕೊಂಡಿರುವ ಪ್ರೀತಿಯೂ, ಚಿಕ್ಕವರು ದೊಡ್ಡವರಲ್ಲಿಟ್ಟುಕೊಂಡಿರುವ ಪ್ರೀತಿಪೂರ್ವಕವಾದ ಗೌರವವೂ ಅತ್ಯುತ್ತಮವಾದುದು. ಸಹೋದರ ಸಹೋದರಿಯರಲ್ಲಿ ಇರುವ ಪ್ರೀತಿಯು ಅತಿ ಸುಂದರವಾದುದು.

ರಾಮ ಲಕ್ಷ್ಮಣರು ಸಹೋದರರಾಗಿದ್ದರು. ಅವರು ಯಾವಾಗಲೂ ಪರಸ್ಪರಪ್ರೀತಿಯುಳ್ಳವರಾಗಿದ್ದರು. ರಾಮಚಂದ್ರನು ಅರಣ್ಯಕ್ಕೆ ಹೊರಟಾಗ ಲಕ್ಷ್ಮಣನು ಅವನನ್ನು ಹಿಂಬಾಲಿಸಿದನು. ರಾಮನುನಿದ್ರೆಮಾಡುವಾಗಲೆಲ್ಲ ಲಕ್ಷ್ಮಣನು ಎಚ್ಚರದಿಂದಕಾದುಕೊಂಡಿರುತ್ತಿದ್ದನು. ಅವನುರಾಮನನ್ನು ಪ್ರೀತಿಸುತ್ತ ಅವನಿಗೆ ಇಷ್ಟವಾದುದನ್ನೆಲ್ಲ ಮಾಡುತ್ತಿದ್ದನು. ತನ್ನಸಂಗಡ ರಾಮನಿಲ್ಲದಿದ್ದರೆ ಲಕ್ಷ್ಮಣನು ಯಾವ ರುಚಿಯಾದ ಆಹಾರವನ್ನೂ ತಿನ್ನುತ್ತಿರಲಿಲ್ಲ. ಅವರು ಕಾಡಿನಲ್ಲಿದ್ದಾಗ್ಗೆ ರಾಮನಿಗೂ ಅವನ ಹೆಂಡತಿಯಾದ ಸೀತೆಗೂ ವಾಸಮಾಡುವುದಕ್ಕಾಗಿ ಪರ್ಣಶಾಲೆಯನ್ನು ಕಟ್ಟಿದವನೂ ಲಕ್ಷ್ಮಣನೇ.

ರಾಮನು ಸೀತೆಯನ್ನು ಲಕ್ಷ್ಮಣನಸ್ವಾಧೀನದಲ್ಲಿಟ್ಟಾಗ ಅವನು ಎಷ್ಟು ಪ್ರೀತಿಯಿಂದ ಅವಳನ್ನು ರಕ್ಷಿಸಿದನು ? ಯಾವಾಗ ಅವಳು ರಾಕ್ಷಸನ ಕಪಟಧ್ವನಿಯಿಂದಮೋಸಹೋಗಿ ರಾಮನು "ಓಲಕ್ಷ್ಮಣಾ ಓ ಸೀತಾ ! ಸಹಾಯಮಾಡಿ." ಎಂದು ಕೂಗುತ್ತಾನೆಂದು ಭಾವಿಸಿದಳೋ, ಯಾವಾಗ "ಲಕ್ಷ್ಮಣನೇ, ನೀನುಹೋಗಿ ರಾಮನಿಗೆ ಸಹಾಯವನ್ನುಮಾಡು " ಎಂದು ಸೀತೆಯು ಆಜ್ಞಾಪಿಸಿದಳೋ ಆಗಮಾತ್ರ ಅವನು ಸೀತೆಯನ್ನುಬಿಟ್ಟು ಹೋಗಬೇಕಾಗಿಬಂದಿತು.

ದುಷ್ಟನಾದ ರಾವಣನು ಸೀತೆಯನ್ನು ಕದ್ದುಕೊಂಡು ಹೋದಾಗ, ಲಕ್ಷ್ಮಣನು ರಾಮನ ಸಂಗಡವಿದ್ದು ಸೀತೆಯನ್ನು ಹುಡುಕುವುದಕ್ಕಾಗಿ ಎಷ್ಟು ಪ್ರಯಾಸಪಟ್ಟನು ! ರಾಮನಿಗೆ ಸಮಾಧಾನವನ್ನುಂಟುಮಾಡುವುದಕ್ಕೆ ತನಗೆ ಸಾಧ್ಯವಾದುದನ್ನೆಲ್ಲಾ ಮಾಡಿದನು. ಅವನು ಸೀತೆಯನ್ನು ಹುಡುಕುವುದರಲ್ಲಿ ಶಾಂತಚಿತ್ತನಾಗಿರುವಂತೆ ಪ್ರೀತಿಯಿಂದ ಸಹಾಯಮಾಡಿದನು.

ರಾಮನೂ ಲಕ್ಷ್ಮಣನನ್ನು ಬಹಳವಾಗಿ ಪ್ರೀತಿಸುತ್ತಿದ್ದನು. ಲಕ್ಷ್ಮಣನು ಗಾಯವನ್ನುಹೊಂದಿ ಭೂಮಿಯಮೇಲೆ ಬಿದ್ದಿದ್ದಾಗ ರಾಮನನ್ನು ಸಮಾಧಾನಪಡಿಸಲು ಯಾರಿಗೂ ಸಾಧ್ಯವಿರಲಿಲ್ಲ. ಅವನು "ಅಯ್ಯೋ ! ನನ್ನ ಸಹೋದರನೇ, ನೀನು ನನ್ನನ್ನು ಅನುಸರಿಸಿ ಅರಣ್ಯಕ್ಕೆ ಹೇಗೆ ಬಂದೆಯೋ, ಹಾಗೆಯೇ ನಾನು ನಿನ್ನಹಿಂದೆ ಲೋಕಾಂತರಕ್ಕೆ ಬರುವೆನು " ಎಂದುಹೇಳಿ ಅವನೂ ತನ್ನ ತಮ್ಮನಸಂಗಡ ಮರಣವನ್ನೈದಲು ಸಿದ್ಧನಾಗಿದ್ದನು. ಆದರೆ ಲಕ್ಷ್ಮಣನ ಗಾಯಗಳು ಗುಣವಾಗಿ ಅವನು ಪುನಃ ಎದ್ದಾಗ ರಾಮನೆಷ್ಟು ಸಂತೋಷಪಟ್ಟನು ! ಎಷ್ಟುಪ್ರೀತಿಯಿಂದ ಅವನನ್ನು ಆಲಂಗಿಸಿಕೊಂಡನು ! ಅವನು "ನನ್ನ ಪ್ರಿಯಸಹೋದರನೇ, ದೇಶದೇಶಗಳಲ್ಲಿಯೂ ಪ್ರತಿಯೊಬ್ಬನೂ ಸ್ನೇಹಿ

ತರುಗಳನ್ನು ಕಾಣಬಹುದು. ಆದರೆ ಯಾವದೇಶದಲ್ಲಿಯೂ ಒಬ್ಬ ಸಹೋದರನನ್ನು ಕಾಣಲು ಅಸಾಧ್ಯ'' ಎಂದು ಹೇಳಿದನು.

ಆಮರಣಾಂತವಾಗಿ ಲಕ್ಷ್ಮಣನು ರಾಮನ ವಿಷಯದಲ್ಲಿ ಪ್ರೀತಿಯನ್ನೇ ತೋರಿಸುತ್ತಿದ್ದನು. ತನ್ನ ಸಹೋದರನ ಕೀರ್ತಿಯನ್ನು ತನ್ನ ಪ್ರಾಣಕ್ಕಿಂತಲೂ ಹೆಚ್ಚಾಗಿ ಕಾಪಾಡುತ್ತಿದ್ದನು. ರಾಮನು ಒಂದಾನೊಂದು ಕಾಲದಲ್ಲಿ ಯಮಧರ್ಮರಾಯನೊಡನೆ ತಾನೊಬ್ಬನೇ ಮಾತನಾಡುವೆನೆಂತಲೂ, ಆ ಕಾಲದಲ್ಲಿ ಇತರರು ಯಾರೂ ಬಂದು ಅಡ್ಡಿಮಾಡಕೂಡದೆಂತಲೂ, ಯಮನಿಗೆ ಮಾತುಕೊಟ್ಟಿದ್ದನು. ಆ ಸಮಯದಲ್ಲಿ ಯಾರಾದರೂ ಅಲ್ಲಿಗೆ ಬಂದರೆ ಅವರಿಗೆ ಮರಣಶಿಕ್ಷೆಯು ವಿಧಿಸಲ್ಪಡುವುದೆಂದು ಹೇಳಿ ಲಕ್ಷ್ಮಣನನ್ನು ಬಾಗಿಲಲ್ಲಿ ಕಾದುಕೊಂಡಿರುವಂತೆ ಆಜ್ಞಾಪಿಸಿದನು.

ರಾಮನೂ ಕಾಲನೂ ಮಾತನಾಡುತ್ತಿದ್ದಾಗ ದೂರ್ವಾಸಋಷಿಯು ರಾಜನನ್ನು ಕಾಣಬೇಕೆಂದು ಅಲ್ಲಿಗೆ ಬಂದನು. ರಾಜನು ಕೆಲಸದಲ್ಲಿರುವನೆಂತಲೂ, ತಾನು ಅವನನ್ನು ತೊಂದರೆ ಪಡಿಸುವುದಕ್ಕಾಗುವುದಿಲ್ಲನೆಂತಲೂ ಲಕ್ಷ್ಮಣನು ಋಷಿಗೆ ಹೇಳಿದನು. ಈ ಮಾತನ್ನು ಕೇಳಿ ದೂರ್ವಾಸಋಷಿಯು ಬಹಳ ಕೋಪವನ್ನು ಹೊಂದಿ ''ನೀನು ಹೋಗಿ ನಾನು ಇಲ್ಲಿ ಬಂದಿರುವ ಸಂಗತಿಯನ್ನು ರಾಜನಿಗೆ ತಿಳಿಸದಿದ್ದರೆ ನಿನಗೂ, ನಿನ್ನ ಸಹೋದರರಿಗೂ, ರಾಜ್ಯಕ್ಕೂ ಶಾಪವನ್ನು ಕೊಡುವೆನೆಂದು ಲಕ್ಷ್ಮಣನೊಡನೆ ಹೇಳಿದನು.

ಆಮೇಲೆ ಲಕ್ಷ್ಮಣನು ತನ್ನಲ್ಲಿ ತಾನೇ ಯೋಚಿಸಿದನು. ''ನನ್ನ ಸಹೋದರರೂ ರಾಜ್ಯವೂ ಕಷ್ಟವನ್ನನುಭವಿಸುವುದಕ್ಕಿಂತಲೂ ನಾನೊಬ್ಬನೇ ಸಾಯುವುದು ಮೇಲಾದುದು.'' ಎಂದು ನಿಶ್ಚಯಿಸಿ ತಾನು ಆ ಕಾಲದಲ್ಲಿ ರಾಮನಬಳಿಗೆ ಹೋದರೆ ಶಿಕ್ಷೆಗೆ ಗುರಿಯಾಗುವೆನೆಂದು ತಿಳಿದಿದ್ದರೂ ಅಲ್ಲಿಗೆಹೋಗಿ ದೂರ್ವಾಸರು ಬಂದಿರುವಸಂಗತಿಯನ್ನು

ಅಣ್ಣನಿಗೆ ತಿಳಿಸಿದನು. ರಾಮನು ಆಗ ಅತ್ಯಂತದುಃಖಪಟ್ಟನು. ಏಕೆಂದರೆ, ರಾಮನು ಕಾಲನಿಗೆ ಕೊಟ್ಟಮಾತನ್ನು ನಡೆಸಲಿಲ್ಲ. ಆದುದರಿಂದ ರಾಮನು ಸತ್ಯವನ್ನು ಸಂರಕ್ಷಿಸಿದ ಹಾಗಾಗಲಿಲ್ಲ. ಇದಕ್ಕಾಗಿಯೇ ಲಕ್ಷ್ಮಣನಿಗೆ ರಾಮನು ಶಿಕ್ಷೆ ಮಾಡಬೇಕಾಯ್ತು. ಆಮೇಲೆ ಲಕ್ಷ್ಮಣನು ನದಿಯ ಸಮೀಪಕ್ಕೆಹೋಗಿ ದೇವರ ಧ್ಯಾನದಲ್ಲಿರುವಾಗ ದೇವತೆಗಳು ಅವನನ್ನು ಕರೆದುಕೊಂಡರು.

ರಾಮನಮೇಲೆ ಅವನಿಗಿದ್ದ ಅತ್ಯಂತವಾದ ಪ್ರೀತಿಯಿಂದ ಅವನೇ ಮೊದಲು ಸತ್ತನು. ರಾಮಚಂದ್ರನು ದೇಹತ್ಯಾಗಮಾಡಿದಾಗ ಲಕ್ಷ್ಮಣನು ಅವನಿಗೆ ಸುಖಾಗಮನವನ್ನು ಕೊಟ್ಟು ಅವರಿಬ್ಬರೂ ಜತೆಯಲ್ಲಿ ಶಾಶ್ವತವಾದ ಸುಖವೂ,ಶಾಂತಿಯೂ, ನೆಲೆಯಾಗಿರುವ ವೈಕುಂಠಲೋಕವನ್ನು ಪ್ರವೇಶಿಸಿದರು.

ಹುಡುಗರೇ ರಾಮಲಕ್ಷ್ಮಣರಲ್ಲಿದ್ದ ಸಹೋದರಪ್ರೀತಿಯಕಥೆಯನ್ನು ಕೇಳಿದಿರಾ. ನೀವೂ ಅವರಂತೆ ಪರಸ್ಪರ ಪ್ರೀತಿಯನ್ನು ತೋರಿಸಿರಿ.

ತಂದೆಯು ಸತ್ತಮೇಲೆ ಹಿರಿಯಣ್ಣನನ್ನು ತಂದೆಯಂತೆ ಭಾವಿಸಬೇಕು. ತಮ್ಮಂದಿರೆಲ್ಲರೂ ಅವನಿಗೆ ವಿಧೇಯರಾಗಿರಬೇಕು. ಹಿರಿಯವನೂ ಅವರನ್ನು ಪ್ರೀತಿಯಿಂದ ಸಂರಕ್ಷಿಸಬೇಕು.

ಪಾಂಡುರಾಜನ ಪುತ್ರರಾದ ಐದುಜನ ಅಣ್ಣತಮ್ಮಂದಿರ ಕಥೆಯೊಂದಿರುವುದು. ಪಾಂಡುರಾಜನಿಗೆ ಯುಧಿಷ್ಠಿರ, ಭೀಮ, ಅರ್ಜುನ, ನಕುಲ, ಸಹದೇವರೆಂಬ ಐದುಜನ ಮಕ್ಕಳಿದ್ದರು. ಅವರಲ್ಲೆಲ್ಲರಿಗಿಂತಲೂ ದೊಡ್ಡವನಾದ ಯುಧಿಷ್ಠಿರನನ್ನು ತಮ್ಮಂದಿರೆಲ್ಲರೂ ತಮ್ಮ ಸ್ವಾಮಿಯೆಂದು ತಿಳಿದಿದ್ದರು. ದುರ್ಯೋಧನನು ಅವರನ್ನು ತಮ್ಮಣ್ಣನಿಗೆ ವಿರೋಧಿಗಳಾಗುವಂತೆ ಮಾಡಬೇಕೆಂದು ಪ್ರಯತ್ನಿಸಿದಾಗ ಅವರೆ

ಲ್ಲರೂ "ನಮ್ಮ ಶಕ್ತಿಗೂ, ನಮ್ಮ ಪ್ರಾಣಗಳಿಗೂ ನಮ್ಮಣ್ಣನಾದ ಯುಧಿಷ್ಠಿರನೇ ಒಡೆಯನು" ಎಂದು ಅವನಿಗೆ ಹೇಳಿಬಿಟ್ಟರು.

ದುಷ್ಟನಾದ ದುರ್ಯೋಧನನು ಯುಧಿಷ್ಠಿರನನ್ನು ಕಾಡಿಗೆ ಓಡಿಸಿದಾಗ ಅವನ ತಮ್ಮಂದಿರೂ ತಮ್ಮಣ್ಣನ ಜತೆಯಲ್ಲಿ ಹೋಗಿ ಅವನು ಅರಣ್ಯವಾಸಮಾಡಿದ 12 ವರ್ಷಗಳವರೆಗೂ ಪ್ರೀತಿಯಿಂದ ಅವನ ಸಂಗಡವಾಸಮಾಡಿದರು. ಅವನಿಗೋಸ್ಕರವೇ ಅವರು ಯುದ್ಧವನ್ನು ಮಾಡಿದರು. ಅವನಿಗಾಗಿಯೇ ಹಣವನ್ನು ಸಂಪಾದಿಸುತಿದ್ದರು. ಇದಕ್ಕೆ ಪ್ರತಿಯಾಗಿ ಯುಧಿಷ್ಟಿರನೂ ಅವರನ್ನು ಪ್ರೀತಿಸುತಿದ್ದನು. ದೇವತೆಗಳು ಯುಧಿಷ್ಠಿರನನ್ನು ಸ್ವರ್ಗಕ್ಕೆ ಕರೆದುಕೊಂಡು ಹೋದಾಗ ಅವನು ಅಲ್ಲಿದ್ದ ದೇವತೆಗಳಿಗೂ, ರಾಜರ್ಷಿಗಳಿಗೂ ನಮಸ್ಕರಿಸಿದನು. ದೇವತೆಗಳು "ಇಲ್ಲಿಯೇ ವಾಸವಾಗಿರು" ಎಂದು ಅವನಿಗೆ ಹೇಳಿದರು. ಆದರೂ ಅವನು ತೃಪ್ತನಾಗದೆ, ತನ್ನ ಹೆಂಡತಿಯನ್ನೂ, ಸಹೋದರರನ್ನೂ ನೋಡಬೇಕೆಂದು ಆಶಿಸಿದನು. ಸುತ್ತಲೂ ನೋಡಿ ಅವರನ್ನು ಕಾಣದೆ ದೇವತೆಗಳನ್ನು ಕುರಿತು "ಎಲ್ಲಿ ನನ್ನ ಸಹೋದರರಿರುವರೋ ಆ ಸ್ಥಳವು ಸುಖವುಳ್ಳದ್ದಾಗಿರಲೀ, ದುಃಖವುಳ್ಳದ್ದಾಗಿರಲೀ, ಅಲ್ಲಿಗೆ ನಾನು ಹೋಗಬೇಕು. ಅವರಿಲ್ಲದ ಸ್ಥಳವು ಎಷ್ಟು ಸುಖವನ್ನುಂಟುಮಾಡುವುದಾಗಿದ್ದರೂ ಅಲ್ಲಿರುವುದಕ್ಕೆ ನನಗಿಷ್ಟವಿಲ್ಲ." ಎಂದು ಹೇಳಿದನು.

ದೇವತೆಗಳು ಸ್ವರ್ಗದಲ್ಲೇ ವಾಸಮಾಡುವಂತೆ ಯುಧಿಷ್ಠಿರನಿಗೆ ಎಷ್ಟು ಪ್ರಯತ್ನದಿಂದ ಬೋಧಿಸಿದರೂ ಅವನು ಸಹೋದರರನ್ನು ಬಿಟ್ಟಿರುವುದಕ್ಕೆ ಇಷ್ಟಪಡಲಿಲ್ಲ. ನನ್ನ ಸಹೋದರರೂ, ದ್ರೌಪದಿಯೂ, ಎಲ್ಲಿರುವರೋ ಅಲ್ಲಿಗೆ ಹೋಗಲು ಇಷ್ಟಪಡುತ್ತೇನೆಂದು ಹೇಳಿಬಿಟ್ಟನು.

ಆಮೇಲೆ ಒಬ್ಬ ದೇವದೂತನು ಯುಧಿಷ್ಠಿರನನ್ನು ಕರೆದುಕೊಂಡು ಪ್ರಕಾಶಮಾನವಾದ ಮತ್ತು ಸುಂದರವಾದ ಸ್ವರ್ಗಲೋಕವನ್ನು ಬಿಟ್ಟು ದುಃಖಕರವಾದ ಮತ್ತು ಕತ್ತಲೆಯಿಂದ ಕೂಡಿದ ಸ್ಥಳ

ಕ್ಕೆ ಹೋದನು. ಅವರ ಸುತ್ತಲೂ ಅಸಹ್ಯಕರವಾದ ಕೀಟಗಳು ಮುತ್ತಿಕೊಂಡವು. ಘೋರವಾದ ರೂಪಗಳು ಅವರನ್ನಾವರಿಸಿದುವು. ಅಲ್ಲಿಯ ನೆಲವು ಗಟ್ಟಿಯಾದ ಕಲ್ಲುಗಳಿಂದಲೂ, ಮುಳ್ಳುಗಳಿಂದಲೂ ತುಂಬಿದ್ದಿತು.

ಇದನ್ನು ನೋಡಿ ಯುಧಿಷ್ಠಿರನು ದೇವದೂತನನ್ನು ಕುರಿತು, ಇದು ಯಾವಸ್ಥಳ? ನನ್ನನ್ನು ಇಲ್ಲಿಗೇಕೆ ಕರೆದುಕೊಂಡು ಬಂದೆ? ನನ್ನ ಸಹೋದರರು ಇಲ್ಲಿ ಎಂದಿಗೂ ಇರಲಾರರು.'' ಎಂದು ಹೇಳಿದನು. ಆಗ ದೇವದೂತನು ಅಲ್ಲಿಯೇ ನಿಂತುಕೊಂಡು ''ದೇವತೆಗಳು ಇಷ್ಟು ದೂರ ಬರಬೇಕೆಂದು ನನಗೆ ಹೇಳಿದರು. ಎಲೈ ರಾಜನೇ! ನಿನಗೆ ಆಯಾಸವಾಗಿದ್ದರೆ ನನ್ನ ಸಂಗಡ ಹಿಂತಿರುಗಬಹುದು.'' ಎಂದು ಹೇಳಿದನು. ಆಗ ಯುಧಿಷ್ಠಿರನಿಗೆ ಬಹಳ ದುಃಖವಾಯ್ತು. ತನ್ನ ಸಹೋದರರು ಅಂತಹ ದುಷ್ಟಪ್ರದೇಶದಲ್ಲಿರುತ್ತಾರೆಂದು ಅವನು ತಿಳಿದಿರಲಿಲ್ಲ. ಆದುದರಿಂದ ಅವನು ಹಿಂತಿರುಗುತಿದ್ದನು, ಆಗ ''ನಿಲ್ಲು, ಓ ರಾಜನೇ, ಒಂದುಕ್ಷಣ ನಿಲ್ಲು, ನಿನ್ನ ಆಗಮನವು ನಮಗೆ ಹಿತಕರವಾಗಿದೆ.'' ಎಂಬ ದುಃಖಸೂಚಕವಾದ ಧ್ವನಿಯನ್ನು ಕೇಳಿದನು. ಎಲ್ಲಾ ಕಡೆಯಿಂದಲೂ ಈ ವ್ಯಸನಕರವಾದ ಧ್ವನಿಗಳು ಬಂದವು. ದಯಾಳುವಾದ ಯುಧಿಷ್ಠಿರನು ಸ್ತಬ್ಧನಾಗಿ ನಿಂತನು. ಆ ಧ್ವನಿಯು ಅವನಿಗೆ ಪರಿಚಿತವಾದ ಧ್ವನಿಯಾಗಿದ್ದಂತೆ ತಿಳಿಯಿತು. ಆಗ ಯುಧಿಷ್ಠಿರನು ''ನೀವ್ಯಾರು ? ಇಲ್ಲಿ ಏಕೆ ಇರುವಿರಿ? ಎಂದು ಕೇಳಿದನು.'' ಅವನ ಸುತ್ತಲೂ ''ನಾನು ಕರ್ಣನು, ನಾನು ಭೀಮನು, ನಾನು ಅರ್ಜುನನು, ನಾನು ನಕುಲನು, ನಾನು ದ್ರೌಪದಿ'' ಎಂಬ ವ್ಯಸನಕರವಾದ ಧ್ವನಿಗಳು ಕೇಳಿಸಿದುವು. ಯುಧಿಷ್ಠಿರನು ಇದನ್ನು ಕೇಳಿ ಕೋಪದಿಂದ ದೇವದೂತನ ಕಡೆಗೆ ತಿರುಗಿ ''ನೀನು ಯಾರದೂತನೋ ಅವರ ಬಳಿಗೆ ಹೋಗು.' ಅವರಿರುವ ಬಳಿಗೆ ನಾನು ಬರುವುದಿಲ್ಲವೆಂದು ಅವರಿಗೆ

ಹೇಳು. ನನ್ನ ತಮ್ಮಂದಿರಿಗೆ ಸುಖವಾಗುವಂತೆ ಅವರ ಸಂಗಡನಾಶಿಲ್ಲಿಯೇ ಇರುವೆನು.'' ಎಂದು ಹೇಳಿ ಆ ಗಾಢಾಂಧಕಾರಕ್ಕೆ ಮತ್ತೆ ಹೋದನು.

ಆಗ ಒಂದು ಆಶ್ಚರ್ಯವು ನಡೆಯಿತು. ಒಂದು ಪ್ರಕಾಶಮಾನವಾದ ಬೆಳಕು ಸುತ್ತಲೂ ವ್ಯಾಪಿಸಿತು. ಅಂಧಕಾರವು ಅದೃಶ್ಯವಾಯ್ತು. ಗದ್ದಲದಿಂದ ತುಂಬಿದ ದೃಷ್ಟಿಗಳೂ ಮತ್ತು ದುರ್ವಾಸನೆಗಳೂ ನಾಶವಾದವು. ಮನೋಹರವಾದ ಸುವಾಸನೆಯೂ, ತಂಪಾದ ಗಾಳಿಯೂ ಹರಡಿತು. ಕಲ್ಲುಮುಳ್ಳುಗಳಿಂದ ಕೂಡಿದ್ದ ದಾರಿಯು ಹೂಗಳಿಂದ ತುಂಬಿದ್ದಿತು. ದೇವತೆಗಳು ಅವನ ಬಳಿಯಲ್ಲಿ ಬಂದು ನಿಂತುಕೊಂಡರು. ಆಗ ಧರ್ಮರಾಯನು ಅವರನ್ನು ಕುರಿತು. ‹‹ ನನ್ನ ತಮ್ಮಂದಿರೂ, ದ್ರೌಪದಿಯೂ ಈ ಭಯಂಕರವಾದ ಸ್ಥಳದಲ್ಲೇಕಿರುವರು'' ಎಂದು ಕೇಳಿದನು. ದೇವತೆಗಳು ಎಲೈ ರಾಜನೇ, ಪೂರ್ವಜನ್ಮದಲ್ಲಿ ಮಾಡಿದ ಪಾಪ ಕೃತ್ಯಗಳಿಗಾಗಿ ಅನೇಕ ಜನರು ಈ ವ್ಯಸನಕರವಾದ ಸ್ಥಳವನ್ನು ದಾಟಬೇಕು. ‹‹ ನೀನು ಇದನ್ನು ದಾಟಿರುವೆ. ಇಲ್ಲದಿದ್ದರೆ ಈ ಅಂಧಕಾರದಿಂದ ಕೂಡಿದ ಸ್ಥಳದಲ್ಲಿ ನೀನೂ ನಿನ್ನ ತಮ್ಮಂದಿರೊಡನೆ ಇರಬೇಕಾಗಿತ್ತು. ಈಗ ಸೌಖ್ಯವಾಗಿರು ನಿನ್ನ ಸಹೋದರರು ನಿಜವಾಗಿಯೂ ಇಲ್ಲಿಲ್ಲ. ಇದು ನಿನ್ನನ್ನು ಪರೀಕ್ಷಿಸುವುದಕ್ಕಾಗಿ ನಡೆದ ಒಂದು ಸ್ವಪ್ನವಾಗಿದೆ.'' ಎಂದು ಹೇಳಿದರು. ಆಮೇಲೆ ಯುಧಿಷ್ಠಿರನು ದೇವತೆಗಳೊಡನೆ ಸ್ವರ್ಗಕ್ಕೆ ಹೋದನು.

ಪ್ರೀತಿಯೆಂಬುದು ಬಹಳ ದೊಡ್ಡದು. ಈ ರೀತಿಯಲ್ಲಿ ಸಹೋದರರು ಭೂಮಿಯಲ್ಲಿದ್ದಾಗ ಪರಸ್ಪರ ಪ್ರೀತಿಯಿಂದಿದ್ದರು. ಆ ಪ್ರೀತಿಯೇ ಸುಖದಿಂದಲೂ, ಸಂತೋಷದಿಂದಲೂ, ಕೂಡಿದ ಸ್ವರ್ಗದಲ್ಲಿ ಅವರೆಲ್ಲರನ್ನೂ ಒಟ್ಟಿಗೆ ಸೇರಿಸಿತು.

ಮ। ವೃ ॥ ನಿಸೆಯೊಳ್ ಸೌಖ್ಯದೆ ನಿದ್ರೆಗೈಯೆಪಗಲೊಳ್ ನೀನ್ನ್ಯಾಯ
ದಿಂ ಕಾರ್ಯಮಂ ॥ ಎಸೆಗೈವಾರ್ಥಕದೊಳ್ ಸುಖಂಲಭಿಸಲಾ ಸತ್ಕಾರ್ಯ

ದಿಂ ಯೌವನಂ ಎಸೆಯುತ್ತಿರ್ಕೆ ವಿನೋದದಿಂದೆ ಪರದೋಳ್ ಭೋಗಂಗ
ಳಂ ಭೋಗಿಸಲ್ ॥ ಒಸೆದಿಂತಪ್ಪುರು ಕಾರ್ಯಮಂ ನಡೆಸುನಿಂ ಕಾಲಾತ್ಯ
ಯಂ ಮಾಡದಿರ್ ॥

---

## ಗಂಡಹೆಂಡಿರು. (Husband and Wife.)

ನೀವು ಸಣ್ಣಮಕ್ಕಳಾಗಿರುವಾಗ ಹಿಂದೆ ಹೇಳಿದಂತೆ ಸಹೋದರ ಸಹೋದರಿಯರಲ್ಲಿನ ಪ್ರೀತಿಯನ್ನು ಅನುಭವಿಸಲು ಶಕ್ತರಾಗಿರುತ್ತೀರಿ. ಈ ಪ್ರೀತಿಯು ನಿಜವಾಗಿಯೂ ಮನೋಹರವಾದುದು. ನೀವು ಪ್ರಾಪ್ತ ವಯಸ್ಕರಾದಾಗ ನಿಮಗೆಲ್ಲರಿಗೂ ಇನ್ನೊಂದು ಬೇರೇ ವಿಧವಾದ ಪ್ರೀತಿಯುಂಟಾಗುವುದು. ಅದೇ ಗಂಡಹೆಂಡಿರ ಪ್ರೀತಿ ಎಂಬುದು. ಗಂಡಹೆಂಡಿರು ಸಮಾನವಾದ ಸುಖದುಃಖವುಳ್ಳವರೆಂದು ಮನುವು ಹೇಳಿರುತ್ತಾನೆ. ಯಾವುದು ಗಂಡನಿಗೆ ದುಃಖವನ್ನುಂಟುಮಾಡು ವುದೋ ಅದು ಪ್ರೀತಿಯಿಂದಕೂಡಿದ ಹೆಂಡತಿಯ ಹೃದಯವನ್ನು ನೋಯಿಸುತ್ತದೆ. ಈ ಲೋಕದಲ್ಲಿ ಸುಖದುಃಖಗಳನ್ನು ಅವರಿಬ್ಬರೂ ಒಟ್ಟಿಗೆ ದಾಟಬೇಕು. ಅವರಲ್ಲಿರುವ ಪರಸ್ಪರ ಪ್ರೀತಿಯು ಗಂಡನನ್ನು ಕರುಣೆಯುಳ್ಳವನನ್ನಾಗಿಯೂ, ಹೆಂಡತಿಯನ್ನು ಭಕ್ತಿಯುಳ್ಳವಳನ್ನಾ ಗಿಯೂ ಮಾಡುತ್ತದೆ.

ಪುಸ್ತಕಗಳಲ್ಲಿ ಗಂಡಹೆಂಡಿರ ಪರಸ್ಪರಪ್ರೀತಿಯ ವಿಷಯವಾದ ಕಥೆಗಳನೇಕವಾಗಿರುವುವು. ರಾಜಪುತ್ರನಾದ ಶ್ರೀರಾಮಚಂದ್ರನು ತನ್ನ ತಂದೆಯ ಆಸ್ಥಾನದಲ್ಲಿರಾಜಪುತ್ರಿಯಾದ ಸೀತಾದೇವಿಯೊಡನೆ ಸುಖವಾ ಗಿದ್ದನು. ವನವಾಸಮಾಡಬೇಕೆಂದು ದಶರಥನು ರಾಮನಿಗೆ ಆಜ್ಞಾಪಿ ಸುತ್ತಲು, ಸೀತೆಯು ನಾನೂ ನಿನ್ನೊಡನೆ ಕಾಡಿಗೆ ಬರುವುದಕ್ಕೆ ಅಪ್ಪ ಣೆಕೊಡಬೇಕೆಂದು ರಾಮನನ್ನು ಕೇಳಿಕೊಂಡಳು. ಎಷ್ಟು ಐಶ್ವರ್ಯ

ಇದ್ದರೂ ಅವುಗಳೊಂದೂ ಅವಳಿಗೆ ಬೇಕಾಗಲಿಲ್ಲ. ಸೀತೆಯು ಕಾಡಿಗೆ ಬಂದರೆ ಅವಳ ಮೃದುವಾದ ದೇಹವು ಬಳಲುವುದೆಂದೂ, ಅಲ್ಪವಾದ ಶಕ್ತಿಯು ಕುಗ್ಗುವುದೆಂದೂ ರಾಮನು ತಿಳಿದು, ತನ್ನ ತಂದೆಯ ಅರಮನೆಯಲ್ಲಿಯೆ ಸುಖವಾಗಿಬೇಕೆಂದು ಆಕೆಯನ್ನು ಬೇಡಿಕೊಂಡನು. ಆಗ ಆಕೆಯು ನಿಜವಾಗಿಯೂ ವ್ಯಸನವನ್ನು ಹೊಂದಿದಳು. ಆದರೆ ಅವನು ಅವಳಿಗೆ ತನ್ನಸಂಗಡಬರಬಹುದೆಂದು ಅಪ್ಪಣೆಯನ್ನು ಕೊಟ್ಟಾಗ ಆಕೆಯ ಸಂತೋಷಕ್ಕೆ ಪಾರವೇ ಇರಲಿಲ್ಲ.

ರಾಕ್ಷಸನಾದ ರಾವಣನು ಸೀತೆಯನ್ನು ಕದ್ದುಕೊಂಡು ಹೋದಾಗ ಶ್ರೀರಾಮನು ರಾತ್ರಿಯೂ ಹಗಲೂ ಆಕೆಯನ್ನು ಹುಡುಕಿದನು ಅವನಿಗೆ ದಣುವೂಯಿಲ್ಲ. ವಿಶ್ರಾಂತಿಯೂಯಿಲ್ಲ. ಭಯಂಕರನಾದ ರಾವಣನ ಅರಮನೆಯಲ್ಲಿ ಸೀತೆಯು ಒಂಟಿಯಾಗಿದ್ದುಕೊಂಡು ಶ್ರೀರಾಮನಲ್ಲಿರುವ ಪ್ರೀತಿಯನ್ನೇ ಕಾಪಾಡಿಕೊಂಡಿದ್ದಳು. "ಹಣದಿಂದಲಾಗಲಿ, ಐಶ್ವರ್ಯದಿಂದಲಾಗಲಿ, ನೀನು ನನ್ನ ಮನಸ್ಸನ್ನು ಬೇರೆ ಮಾಡಲಾರೆ. ಸೂರ್ಯನ ಕಿರಣಗಳು ಆತನಿಗೇ ಹೇಗೆ ಸೇರಿದವುಗಳೋ ಹಾಗೆಯೇ ನಾನು ಶ್ರೀರಾಮಚಂದ್ರನಿಗೆಮಾತ್ರ ಸೇರಿದವಳು" ಎಂದು ಸೀತಾದೇವಿಯು ರಾವಣನಿಗೆ ಹೇಳಿದಳು.

ಸಾವಿತ್ರಿಯ ಮನೋಹರವಾದ ಚರಿತ್ರೆಯಲ್ಲಿ ಪ್ರೀತಿಯಿಂದ ಕೂಡಿದ ಹೆಂಡತಿಯು ಏನುಮಾಡಬಲ್ಲಳೆಂಬುದನ್ನು ನಾವು ಕಲಿಯುವೆವು.

ಪೂರ್ವಕಾಲದಲ್ಲಿ ಅಶ್ವಪತಿಯೆಂಬರಾಜನು ಬಹಳ ಒಳ್ಳೆಯವನಾಗಿಯೂ, ಧರ್ಮಿಷ್ಠನಾಗಿಯೂ, ಆಲೋಚನಾಪರನಾಗಿಯೂ, ಕ್ಷಮಾಗುಣವುಳ್ಳವನಾಗಿಯೂ ಇದ್ದನು. ಅವನಿಗೆ ವಯಸ್ಸುಕಳೆಯುತ್ತಾಬಂದಿತು. ಆ ರಾಜನು ತನಗೆ ಮಕ್ಕಳಿಲ್ಲದೆ ಬಹಳ ದುಃಖಪಡುತ್ತಿದ್ದನು. ಆದುದರಿಂದ ಅವನು ಅನೇಕದಿವಸಗಳವರೆಗೆ ನಿಯಮದಿಂದ

ದೇವತೆಗಳನ್ನು ಪೂಜಿಸುತಿದ್ದನು. ಆಮೇಲೆ ಅವನಿಗೆ ಒಬ್ಬಳು ಹೆಣ್ಣು ಮಗಳು ಹುಟ್ಟಿದಳು. ಅವಳಿಗೆ ಸಾವಿತ್ರಿಯೆಂದು ಹೆಸರಿಟ್ಟನು. ಸಾವಿತ್ರಿಯು ಗಂಭೀರಸ್ವಭಾವವುಳ್ಳವಳಾಗಿಯೂ, ಬಂಗಾರದ ಪ್ರತಿಮೆಯಂತೆ ಸುಂದರಳಾಗಿಯೂ, ಕೃಶಾಂಗಿಯಾಗಿಯೂ, ಇದ್ದಳು. ಇವಳನ್ನುನೋಡಿ ಜನರು ತಮ್ಮನ್ನು ನೋಡುವುದಕ್ಕಾಗಿಬಂದ ಯಾವಳೋ ಒಬ್ಬಳು ದೇವತೆಯೆಂದು ತಿಳಿದಿದ್ದರು.

ಹೀಗಿರಲು ಒಂದಾನೊಂದುದಿನ ಸಾವಿತ್ರಿಯ ತಂದೆಯು ಅವಳಿಗೆ ಯೌವನವು ಪ್ರಾಪ್ತವಾದುದನ್ನು ತಿಳಿದು “ ಮಗಳೇ, ನಿನಗೆ ತಕ್ಕಪತಿಯನ್ನು ನೀನೇವರಿಸು ” ಎಂದುಹೇಳಿ ಅವಳ ಜತೆಯಲ್ಲಿ ಹೋಗುವಂತೆ ಸೇವಕರಿಗೆ ಆಜ್ಞಾಪಿಸಿದನು. ಮೃದುವಾದ ನಡತೆಯುಳ್ಳ ಸಾವಿತ್ರಿಯು ತನ್ನ ತಂದೆಗೆ ನಮಸ್ಕರಿಸಿ ತಂದೆಯ ಆಜ್ಞಾನುಸಾರವಾಗಿ ವರನನ್ನು ಹುಡುಕಿಕೊಂಡು ಹೊರಟಳು. ಇವಳ ಜತೆಯಲ್ಲಿ ಅಶ್ವಪತಿಯು ಅನುಭವಶಾಲಿಗಳಾದ ಮಂತ್ರಿಗಳೂ ಹೊರಟರು. ಸಾವಿತ್ರಿಯು ಇವರೊಡನೆ ಎಲ್ಲಾ ರಾಜರ್ಷಿಗಳ ಮನೆಗಳಿಗೂ ಹೋಗಿ ನೋಡಿಕೊಂಡು ತನ್ನ ತಂದೆಯ ಅರಮನೆಗೆ ಹಿಂತಿರುಗಿಬಂದಳು.

ಇವಳು ತಂದೆಯ ಸಮೀಪಕ್ಕೆ ಬಂದಾಗ ಮಹಾತ್ಮನಾದ ನಾರದಋಷಿಯು ಅವನೊಡನೆ ಮಾತನಾಡುತ್ತ ಕುಳಿತಿದ್ದನು. ಸಾವಿತ್ರಿಯು ಇವರಿಬ್ಬರಿಗೂ ಭಕ್ತಿಯಿಂದ ನಮಸ್ಕರಿಸಿ ತಾನು ಪತಿಯನ್ನು ಗೊತ್ತುಮಾಡಿಕೊಂಡು ಬಂದುದನ್ನು ಹೇಳಿದಳು. “ ಎಲೈ ರಾಜನೇ, ಶಾಲ್ವರೊಳಗೆ ದ್ಯುಮತ್ಸೇನನೆಂಬ ಒಳ್ಳೆಯ ರಾಜನಿರುವನು. ಈ ರಾಜನು ಜರಾಯುಕ್ತನಾಗಿಯೂ, ಕುರುಡನಾಗಿಯೂ, ಇರುವನು ಶತ್ರುಗಳು ಇವನ ರಾಜ್ಯವನ್ನು ಕಿತ್ತುಕೊಂಡು ಇವನನ್ನು ಕಾಡಿಗೆ ಓಡಿಸಿದರು. ಈತನು ಬಹಳಕಾಲದಿಂದಲೂ ತನ್ನಹೆಂಡತಿಯೊಡನೆಯೂ, ಸತ್ಯವಾನನೆಂಬ ಮಗನೊಡನೆಯೂ, ಅರಣ್ಯದಲ್ಲಿಯೇ ವಾಸಮಾಡುತ್ತಿ

ರುವನು. ಈ ಸತ್ಯವಾನನೆಂಬ ಯುವಕನನ್ನು ನನ್ನ ಪತಿಯೆಂದು ನನ್ನ ಹೃದಯದಲ್ಲಿ ಒಪ್ಪಿಕೊಂಡಿರುತ್ತೇನೆ. '' ಎಂದು ಹೇಳಿದಳು. ಸಾವಿತ್ರಿಯ ಈ ಮಾತುಗಳನ್ನು ನಾರದರು ಕೇಳಿ " ಅಯ್ಯೋ! ರಾಜನೇ! ಸಾವಿತ್ರಿಯು ತಿಳುವಳಿಕೆಯಿಲ್ಲದೆ ಅಕ್ರಮವಾದ ಕೆಲಸವನ್ನು ಮಾಡಿಬಿಟ್ಟಳು. '' ಎಂದು ಹೇಳಿದನು.

ರಾಜನು " ಅದು ಹೇಗೆ? ನನ್ನ ಮಗಳಿಗೆ ಆತನು ತಕ್ಕ ವರನಲ್ಲವೆ? ಆತನಿಗೆ ಧೈರ್ಯವೂ, ಬುದ್ಧಿಯೂ, ಕ್ಷಮಾಗುಣವೂ ಇಲ್ಲವೆ?

ನಾರದನು. " ಅವನಿಗೆ ಇವೆಲ್ಲವೂ ಸಂಪೂರ್ಣವಾಗಿವೆ. ''

ರಾಜ.—" ಅವನು ಉದಾರಿಯಾಗಿಯೂ, ದೈವಭಕ್ತಿಯುಳ್ಳವನಾಗಿಯೂ, ಇರುವನೇ? ''

ನಾರದ.—"ನಿಜವಾಗಿಯೂ ಹಾಗೆಯೇ ಇರುವನು. ಇದಲ್ಲದೆ ಅವನು ಚಂದ್ರನಂತೆ ಸುಂದರನಾಗಿಯೂ, ಸಾಧುವಾಗಿಯೂ, ಧೈರ್ಯಶಾಲಿಯಾಗಿಯೂ, ಸತ್ಯವಂತನಾಗಿಯೂ, ಸ್ನೇಹಿತರಲ್ಲಿ ಪ್ರೀತಿಯುಳ್ಳವನಾಗಿಯೂ, ಮರ್ಯಾದೆಯುಳ್ಳವನಾಗಿಯೂ, ತಾಳ್ಮೆಯುಳ್ಳವನಾಗಿಯೂ, ಇರುವನು.''

ರಾಜ.—" ಅವನಿಗೆಲ್ಲಾ ಸದ್ಗುಣಗಳೂ ಇವೆಯಷ್ಟೆ. ನನ್ನ ಮಗಳು ಅವನನ್ನು ವರಿಸಿದ್ದು ಹೇಗೆ ತಪ್ಪಾಯಿತು? ''

ನಾರದ.—"ಅವನು ಒಂದೇ ಒಂದು ನ್ಯೂನತೆಯನ್ನು ಹೊಂದಿರುವನು. ಅವನ ಪ್ರಾಣವು ಇನ್ನು ಸ್ವಲ್ಪದಿವಸಗಳೇ ಇರುವುದು. ಈದಿನ ಮೊದಲುಗೊಂಡು ಇನ್ನೊಂದು ವರ್ಷದಲ್ಲಿ ಅವನು ತನ್ನ ದೇಹವನ್ನು ಬಿಡುವನು. '' ಎಂದು ಹೇಳಿದನು.

ರಾಜನು ನಾರದಋಷಿಯ ಮಾತನ್ನು ಕೇಳಿ ಸಾವಿತ್ರಿಯನ್ನು ಕುರಿತು. " ಮಗಳೇ, ಇನ್ನೊಬ್ಬನನ್ನು ನಿನ್ನ ಪತಿಯನ್ನಾಗಿ ವರಿಸ

ಬೇಕು" ಎಂದನು. ಸಾವಿತ್ರಿಯು "ತಂದೆಯೇ, ನಾನು ಸತ್ಯವಾನನನ್ನೇ ವಿವಾಹಮಾಡಿಕೊಳ್ಳುವೆನೆಂದು ಮೊದಲು ನಿಶ್ಚಯಮಾಡಿದೆನು. ಅವನ ಆಯುಷ್ಯವು ಹೆಚ್ಚಾಗಲಿ, ಕಮ್ಮಿಯಾಗಲಿ, ನಾನು ಅವನನ್ನು ಪ್ರೀತಿಸಿರುವೆನು. ಪುನಃ ಮತ್ತೊಬ್ಬನನ್ನು ವರಿಸಲಾರೆನು." ಎಂದು ಉತ್ತರಕೊಟ್ಟಳು. ನಾರದನು ಅದು ಒಳ್ಳೆಯದೆಂದು ಯೋಚಿಸಿ "ಓ ರಾಜನೇ, ಸಾವಿತ್ರಿಯು ಚಿತ್ತ ಚಾಂಚಲ್ಯವನ್ನು ಹೊಂದುವುದಿಲ್ಲ. ಆದುದರಿಂದ ನಾನು ಅವಳನ್ನು ಆಶಿರ್ವದಿಸುವೆನು ವಿವಾಹವು ನಡೆಯಲಿ" ಎಂದನು. ಆಮೇಲೆ ರಾಜನೂ, ಪುರೋಹಿತರೂ ಸಹ ಸತ್ಯವಾನನ ತಂದೆಯಬಳಿಗೆ ಹೋಗಿ ನಿನ್ನ ಮಗನು ಸಾವಿತ್ರಿಗೆ ಪತಿಯಾಗಬೇಕೆಂದು ಅವನನ್ನು ಕೇಳಿದರು. ದ್ಯುಮತ್ಸೇನನು ಬಹಳ ಸಂತೋಷಪಟ್ಟು "ನನ್ನ ಮಗನಿಗೂ ನಿನ್ನ ಮಗಳಿಗೂ ವಿವಾಹವನ್ನು ಬೆಳಸಬೇಕೆಂಬ ಕುತೂಹಲವು ಬಹಳ ದಿನಗಳಿಂದ ನನಗೆ ಇದ್ದಿತು. ಆದರೂ ನಾನು ರಾಜ್ಯವನ್ನು ಕಳೆದುಕೊಂಡಿದ್ದುದರಿಂದ ಅದನ್ನು ಹೇಳುವುದಕ್ಕೆ ನನಗಿಷ್ಟವಿಲ್ಲದೆಹೋಯ್ತು" ಎಂದು ಹೇಳಿದನು.

ಆಮೇಲೆ ಸಾವಿತ್ರಿಗೂ, ಸತ್ಯವಾನನಿಗೂ ವಿವಾಹವು ನಡೆಯಿತು. ಸಾವಿತ್ರಿಯು ತನ್ನ ಬೆಲೆಯುಳ್ಳ ವಸ್ತ್ರಾಭರಣಗಳನ್ನು ತೆಗೆದುಹಾಕಿ ತನ್ನಗಂಡನ ಜತೆಯಲ್ಲಿ ಅರಣ್ಯದಲ್ಲಿಯೇ ವಾಸಮಾಡುವುದಕ್ಕೆ ಹೊರಟಳು. ಅವಳು ಸದ್ಗುಣಗಳಿಂದಲೂ, ಪ್ರೀತಿಯಿಂದಲೂ, ನಮ್ರತೆಯಿಂದಲೂ, ಅತ್ತೆಮಾವಂದಿರನ್ನು ಸೇವಿಸುತ್ತ ಅವರನ್ನು ಬಹಳವಾಗಿ ಸಂತೋಷಪಡಿಸುತ್ತಿದ್ದಳು. ತನ್ನ ಮೃದುವಾದ ಸ್ವಭಾವದಿಂದಲೂ, ಜಾಣತನದಿಂದಲೂ, ಮನೋಹರವಾದ ಪ್ರೀತಿಯಿಂದಲೂ, ಗಂಡನ ಪ್ರೀತಿಯನ್ನು ಸಂಪಾದಿಸಿದಳು.

ಆ ವ್ಯಸನಾಕ್ರಾಂತಳಾದ ಸಾವಿತ್ರಿಯ ಹೃದಯದಲ್ಲಿ ನಾರದನು ಹೇಳಿದಮಾತು ನೆಲೆಯಾಗಿದ್ದುದರಿಂದ ತನ್ನ ಪತಿಯ ಆಯಸ್ಸು ಅಭಿವೃ

ದ್ಧಿಯಾಗಲು ಏನುಮಾಡಬೇಕೆಂದು ಹಗಲೂ ರಾತ್ರೆಯೂ ಯೋಚಿಸುತ್ತ ದಿನಗಳನ್ನೆಣಿಸುತ್ತಿದ್ದಳು.

ಕಡೆಗೆ ಸತ್ಯವಾನನು ಸಾಯುವುದಕ್ಕೆ ನಾಲ್ಕುದಿನಗಳುಳಿದವು. ಸಾವಿತ್ರಿಹೊರತು ಅವಳ ಮಾವನಾಗಲೀ, ಅತ್ತೆಯಾಗಲೀ, ಸತ್ಯವಾನನಾಗಲೀ, ನಾರದನು ಏನು ಹೇಳಿದನೆಂಬುದನ್ನು ತಿಳಿದಿರಲಿಲ್ಲ. ಸಾವಿತ್ರಿಯು ಒಂದುಹಗಲೂ, ಒಂದುರಾತ್ರೆಯೂ ಒಂದುತೊಟ್ಟು ನೀರನ್ನೂ ಕುಡಿಯದೆ ಉಪವಾಸಮಾಡಿದಳು. ಅವಳ ಮಾವನು ಏಕೆ ಹೀಗೆಮಾಡಿದಳೆಂದು ಆಶ್ಚರ್ಯಪಟ್ಟು ಅವಳನ್ನು ಊಟಮಾಡುವ ಹಾಗೆ ಮಾಡಬೇಕೆಂದು ಪ್ರಯತ್ನಪಟ್ಟನು. ಸಾವಿತ್ರಿಯು ತಾನು ಒಂದು ವ್ರತವನ್ನು ಮಾಡಿರುತ್ತೇನೆಂದು ಹೇಳಿಬಿಟ್ಟಳು. ಇದನ್ನು ಕೇಳಿ ಮಾವನು "ನಿನ್ನ ವ್ರತವನ್ನು ಪೂರ್ತಿಮಾಡು" ಎಂದು ಹೇಳಿದನು.

ವ್ಯಸನಕರವಾದ ಕಡೆಯದಿವಸವು ಪ್ರಾಪ್ತವಾಯ್ತು. ಸಾವಿತ್ರಿಯು ಪ್ರಾತಃಕಾಲದಲ್ಲಿಯೇ ಎದ್ದು "ಈ ದಿನವು ನನ್ನ ಪತಿಯು ಸಾಯುವ ದಿನವಾಗಿದೆ" ಎಂದು ತನ್ನಲ್ಲಿ ತಾನೇ ಯೋಚಿಸಿದಳು. ತನ್ನ ಪ್ರಾತಃಕಾಲದ ಕೆಲಸಗಳನ್ನೆಲ್ಲ ಮುಗಿಸಿದ ಮೇಲೆ ತನ್ನ ಹಿರಿಯರಿಗೆಲ್ಲ ನಮಸ್ಕಾರಮಾಡಿ ಅತ್ತೆಮಾವಂದಿರಿಗೂ ನಮಸ್ಕರಿಸಿದಳು. ಅರಣ್ಯದಲ್ಲಿದ್ದ ಋಷಿಗಳೆಲ್ಲರೂ "ಈಕೆಯು ನಿರಂತರವಾಗಿಯೂ ಸುಮಂಗಲಿಯಾಗಿರಲಿ" ಎಂದು ಆಶೀರ್ವಾದವನ್ನು ಮಾಡಿದರು. ಸಾವಿತ್ರಿಯು ಹಾಗೆಯೇ ಆಗಲೆಂದು ಉತ್ತರಕೊಟ್ಟು ನಾರದನ ಮಾತನ್ನೇ ಯೋಚಿಸುತಿದ್ದಳು.

ಆಮೇಲೆ ಸತ್ಯವಾನನು ಹೆಗಲಿನಮೇಲೆ ಕೊಡಲಿಯನ್ನು ಹಾಕಿಕೊಂಡು ಕಾಡಿಗೆ ಹೊರಟನು. ಸಾವಿತ್ರಿಯು ಅವನಬಳಿಗೆ ಹೋಗಿ ಮೃದುವಾದ ಮಾತುಗಳಿಂದ "ನಾನೂ ನಿನ್ನ ಸಂಗಡ ಬರುವುದಕ್ಕೆ ಅಪ್ಪಣೆಯನ್ನು ಕೊಡು" ಎಂದು ಕೇಳಿದಳು. ಸತ್ಯವಾನನು "ಬೇಡ,

ನೀನು ಉಪವಾಸ ವ್ರತವನ್ನು ಮಾಡಿರುವುದರಿಂದ ಬಲಹೀನಳಾಗಿರುವೆ. ಕಾಡಿನಲ್ಲಿ ನಡೆಯುವುದು ಬಹಳಕಷ್ಟ. ನಿನ್ನ ಮೃದುವಾದ ಕಾಲುಗಳಿಂದ ಅಷ್ಟುದೂರ ನಡೆದುಕೊಂಡು ಬರಲಾರೆ” ಎಂದು ಹೇಳಿದನು. ಸಾವಿತ್ರಿಯು “ನಾನು ಬಲಹೀನಳಾಗಿಯೂ ಇಲ್ಲ. ಆಯಾಸವನ್ನು ಹೊಂದಿಯೂ ಇಲ್ಲ. ನಾನೂ ನಿನ್ನ ಜತೆಯಲ್ಲಿ ಬರಬೇಕು. ತಡೆಮಾಡಬೇಡ” ಎಂದು ಬೇಡಿಕೊಂಡಳು. ಆಮೇಲೆ ಸತ್ಯವಾನನು “ನಿನ್ನ ಇಷ್ಟದಂತೆ ನೀನೂ ನನ್ನ ಜತೆಯಲ್ಲಿ ಬರಬಹುದು. ಆದರೆ ಮೊದಲು ನಮ್ಮ ತಾಯಿತಂದೆಗಳ ಅಪ್ಪಣೆಯನ್ನು ಪಡೆದುಕೋ” ಎಂದು ಹೇಳಿದನು. ತತ್‌ಕ್ಷಣವೇ ಸಾವಿತ್ರಿಯು ಅತ್ತೆಮಾವಂದಿರಬಳಿಗೆ ಹೋಗಿ ವಿಧೇಯತೆಯಿಂದ ತನ್ನ ಕುತೂಹಲವನ್ನು ಹೇಳಿಕೊಂಡು ತನ್ನ ಗಂಡನ ಜತೆಯಲ್ಲಿ ಕಾಡಿಗೆ ಹೋಗುವುದಕ್ಕೆ ಅಪ್ಪಣೆಯನ್ನು ಪಡೆದು ಬಂದಳು. ಆಮೇಲೆ ಸತ್ಯವಾನನೂ, ಸಾವಿತ್ರಿಯೂ ಕಾಡಿಗೆ ಹೊರಟರು. ಸಾವಿತ್ರಿಯು ಗಂಡನೊಡನೆ ಮಾತನಾಡುತ್ತಿದ್ದಾಗ ಅವಳ ಮುಖವು ಮಂದಹಾಸದಿಂದ ಕೂಡಿದ್ದರೂ ಹೃದಯವು ದುಃಖದಿಂದ ಛಿದ್ರವಾಗುತ್ತಿತ್ತು. ಅವರು ಮನೋಹರವಾದ ತೋಪುಗಳನ್ನೂ, ನವಿಲುಗಳನ್ನೂ, ನೋಡುತ್ತಾ ಕಾಡಿಗೆ ಹೋದರು. ಸತ್ಯವಾನನು ದಾರಿಯಲ್ಲಿ ಹೂಗಳಿಂದ ತುಂಬಿದ ಗುಡ್ಡಗಳನ್ನೂ, ಪವಿತ್ರವಾದ ನದಿಗಳನ್ನೂ, ಸಾವಿತ್ರಿಗೆ ತೋರಿಸುತ್ತಾ ಹೋದನು. ಗಂಡನ ಜತೆಯಲ್ಲಿ ಹೋಗುತ್ತಿರುವಾಗ ಆತನ ಮರಣಕಾಲದ ವಿಷಯವಾಗಿ ಯೋಚಿಸುತ್ತಿರುವ ಸಾವಿತ್ರಿಗೆ ಹೃದಯದಲ್ಲಿ ದುಃಖವು ತುಂಬಿದ್ದಿತು.

ಕಡೆಗೆ ಸತ್ಯವಾನನು ಕಾಡಿನ ಒಂದು ಪ್ರದೇಶದಲ್ಲಿ ತನ್ನ ಕೆಲಸಕ್ಕೆ ಪ್ರಾರಂಭಿಸಿದನು. ಅವನು ಹಣ್ಣುಗಳನ್ನು ಕೊಯ್ದು ಬುಟ್ಟಿಯಲ್ಲಿ ತುಂಬಿ ಸಮಿತ್ತುಗಳನ್ನು ಕೊಯ್ಯಲು ಪ್ರಾರಂಭಿಸಿದನು. ಅವನು ಹೀಗೆ ಮಾಡುತ್ತಿರುವಾಗ ಅವನ ತಲೆಯೂ ಕೈಕಾಲುಗಳೂ ನೋಯುವ

ದಕ್ಕೆ ಪ್ರಾರಂಭಿಸಿತು. ಆಗವನು ಸಾವಿತ್ರಿಯಬಳಿಗೆ ಹೋಗಿ ತಾನು ಮಲಗಬೇಕೆಂದು ಹೇಳಿದನು. ಸಾವಿತ್ರಿಯು ಕುಳಿತುಕೊಂಡು ತನ್ನ ಗಂಡನ ತಲೆಯನ್ನು ತೊಡೆಯಮೇಲೆ ಇರಿಸಿಕೊಂಡು ಆತನಿಗೆ ಅವಸಾನಕಾಲವು ಪ್ರಾಪ್ತವಾಯಿತೆಂದು ಅತಿದುಃಖದಿಂದ ಯೋಚಿಸುತ್ತಿದ್ದಳು.

ತತ್ಕ್ಷಣವೇ ಒಂದು ದೊಡ್ಡದಾದ, ಪ್ರಕಾಶಯುಕ್ತವಾದ ಕೆಂಪುವಸ್ತ್ರವನ್ನು ಧರಿಸಿದ ವಿಗ್ರಹವು ಸತ್ಯವಾನನ ಬಳಿಯಲ್ಲಿ ನಿಂತು ಆತನನ್ನು ದೃಷ್ಟಿಸಿನೋಡುತ್ತಿರುವುದನ್ನು ಕಂಡಳು. ಆಗ ತನ್ನಗಂಡನ ತಲೆಯನ್ನು ಮೆಲ್ಲಗೆ ಭೂಮಿಯಮೇಲಿಟ್ಟು ಆ ಮೂರ್ತಿಗೆ ನಮಸ್ಕರಿಸಿ " ಸತ್ಯವಾಗಿಯೂ ನೀನೊಬ್ಬ ದೇವನಾಗಿರಬೇಕು. ನೀನು ಯಾರು ? ಏತಕ್ಕಾಗಿ ಇಲ್ಲಿಗೆ ಬಂದಿರುವೆ ? ಅದನ್ನು ದಯೆಯಿಟ್ಟು ಹೇಳಬೇಕು" ಎಂದು ಕೇಳಿಕೊಂಡಳು. ಆಮೇಲೆ ಆ ದೇವನು " ನಾನು ಮೃತ್ಯುದೇವತೆಯಾದ ಯಮನು. ನಿನ್ನ ಪತಿಯ ಆಯಸ್ಸು ಮುಗಿದುದರಿಂದಲೂ, ಅವನು ಅನೇಕ ಸದ್ಗುಣಗಳುಳ್ಳವನಾದುದರಿಂದಲೂ, ಅವನನ್ನು ಕರೆದುಕೊಂಡು ಹೋಗುವುದಕ್ಕೆ ನಾನೇ ಬಂದಿರುವೆನು. " ಎಂದು ಹೇಳಿ ಸತ್ಯವಾನನ ಪ್ರಾಣವನ್ನು ಹೊರಗೆ ಎಳೆದುಕೊಂಡು ತನ್ನ ದಾರಿಯನ್ನು ಹಿಡಿದು ಹೋಗುತ್ತಿದ್ದನು. ಸಾವಿತ್ರಿಯು ತನ್ನ ಹೃದಯವು ದುಃಖದಿಂದ ತುಂಬಿದ್ದರೂ ಎದ್ದು ಯಮನನ್ನು ಹಿಂಬಾಲಿಸಿದಳು. ಅವಳು ನೆಲದಮೇಲೆ ಬಿದ್ದಿರುವುದು ತನ್ನ ಪತಿಯ ಶರೀರವೆಂದೂ, ಪ್ರಾಣವನ್ನು ಯಮನು ತೆಗೆದುಕೊಂಡು ಹೋಗುತ್ತಿರುವನೆಂದೂ ತಿಳಿದಿದ್ದಳು. ಸಾವಿತ್ರಿಯು ತನ್ನನ್ನು ಹಿಂಬಾಲಿಸುತ್ತಿರುವುದನ್ನು ನೋಡಿ ಯಮನು, "ಎಲೈ ಸಾವಿತ್ರಿಯೇ, ಹಿಂದಿರುಗಿಹೋಗಿ ನಿನ್ನ ಗಂಡನ ಪ್ರೇತಸಂಸ್ಕಾರಗಳನ್ನು ನಡೆಸು " ಎಂಬದಾಗಿ ಹೇಳಿದನು. ಸಾವಿತ್ರಿಯು "ಮಹಾತ್ಮನಾದ ಯಮನೇ ಹಾಗಲ್ಲ. ನನ್ನ ಗಂಡನು ಎಲ್ಲಿಗೆ ಹೋಗುವನೋ, ನಾನೂ ಅಲ್ಲಿಗೆ ಹೋಗುವೆನು. ಇದೇ ಗಂಡಹೆಂಡಿರ ಶಾಶ್ವತವಾದ ಧ

ರ್ಮವು. ನಾನು ನನ್ನ ಗಂಡನನ್ನು ನಿಶ್ಚಯವಾಗಿ ಪ್ರೀತಿಸಿದ್ದರೆ, ನನ್ನ ವ್ರತಗಳನ್ನು ಯಾವಾಗಲೂ ಅನುಸರಿಸಿದ್ದರೆ, ನನ್ನ ಹಿರಿಯರನ್ನು ವಿನಯದಿಂದ ಸೇವಿಸಿದ್ದರೆ, ಈ ರೀತಿಯಾದ ಪುಣ್ಯವನ್ನು ನಾನು ಸಂಪಾದಿಸಿದ್ದರೆ, ನನ್ನ ಧರ್ಮಮಾರ್ಗಕ್ಕೆ ತಡೆಯಾಗದಂತೆ ನಿನ್ನ ಅನುಗ್ರಹವನ್ನು ಬೇಡಿಕೊಳ್ಳುವೆನು'' ಎಂದು ಉತ್ತರಕೊಟ್ಟಳು. ಯಮನು ಅವಳ ಮೃದುನುಡಿಗಳಿಗೆ ಸಂತೋಷಪಟ್ಟು "ನಿನ್ನ ಗಂಡನ ಪ್ರಾಣ ಒಂದುಹೊರತು ನೀನು ಅಪೇಕ್ಷಿಸುವ ಯಾವ ವರವನ್ನಾದರೂ ಕೊಡುವೆನು. ಕೇಳಿಕೋ'' ಎಂದು ಹೇಳಿದನು. ಸಾವಿತ್ರಿಯು ತನಗಾಗಿ ಏನನ್ನೂ ಕೇಳದೆ ಮುಪ್ಪಿನಿಂದ ಕೂಡಿದ ಕುರುಡನಾದ ದ್ಯುಮತ್ಸೇನರಾಜನಿಗೆ ಶಕ್ತಿಯೂ, ಸೂರ್ಯಪ್ರಕಾಶವನ್ನು ನೋಡುವಂತೆ ಕಣ್ಣುಗಳೂ, ಬರಲೆಂದು ಕೇಳಿಕೊಂಡಳು. ಯಮನು ನಿನ್ನ ಇಷ್ಟವು ನೆರವೇರಲೆಂದು ಉತ್ತರಕೊಟ್ಟು, "ನೀನು ನನ್ನ ಹಿಂದೆ ಬಂದು ದಣಿದಿರುವೆ, ಇನ್ನು ಹಿಂದಿರುಗು ; ಇನ್ನು ಹೆಚ್ಚಾಗಿ ಆಯಾಸಪಡಬೇಡ '' ಎಂದು ಹೇಳಿದನು.

ಸಾವಿತ್ರಿಯು ಹಿಂದಿರುಗುವುದಕ್ಕೆ ಇಷ್ಟಪಡದೆ "ನನ್ನ ಗಂಡನು ಎಲ್ಲಿಗೆ ಹೋಗುವನೋ, ನಾನೂ ಅಲ್ಲಿಗೆ ಹೋಗುವೆನು. ಧರ್ಮಿಷ್ಠರೊಡನೆ ಇರುವುದು ಯಾವಾಗಲು ಉತ್ತಮವಾದುದು. ಆದುದರಿಂದ ಎಲೈ ಧರ್ಮರಾಜನೇ! ನಾನೂ ನಿನ್ನಸಂಗಡ ಬರುವೆನು. ಎಂದು ನುಡಿದಳು. ಯಮಧರ್ಮನು ಇವಳ ಮಾತಿಗೆ ಸಂತೋಷಪಟ್ಟು ನಿನ್ನ ಗಂಡನ ಪ್ರಾಣಹೊರತು ಬೇರೊಂದು ವರವನ್ನು ಕೇಳು ಕೊಡುವೆನು'' ಎಂದು ಹೇಳಿದನು. ಸಾವಿತ್ರಿಯು ತನ್ನ ಮುಪ್ಪಿನ ಮಾವನನ್ನು ಯೋಚಿಸಿ "ಆತನ ರಾಜ್ಯವನ್ನು ದುಷ್ಟರು ಆಕ್ರಮಿಸಿರುವರು. ಅವನು ತನ್ನ ರಾಜ್ಯವನ್ನು ಪುನಃ ಹೊಂದಲಿ'' ಎಂದು ಕೇಳಿಕೊಂಡಳು. ಯಮನು "ಹಾಗೆಯೇಆಗಲಿ, ರಾಜಪುತ್ರಿಯೇ, ನೀನು ಹಿಂದಿರುಗು'' ಎಂದನು.

ಆದರೂ ಸಾವಿತ್ರಿಯು ಹಿಂದಿರುಗಲು ಇಷ್ಟಪಡದೆ ಯಮನ ಹಿಂದೆಯೇ ಹೋಗುತ್ತಾ ಧರ್ಮದ ವಿಷಯವಾಗಿಯೂ, ಸದ್ಗುಣಗಳ ವಿಷಯವಾಗಿಯೂ, ಮಾತನಾಡುತ್ತಿದ್ದಳು. ಯಮನು ಸಂತುಷ್ಟನಾಗಿ ಆಕೆಯ ತಂದೆಗೆ ನೂರು ಮಕ್ಕಳಾಗುವಂತೆಯೂ, ಆಕೆಗೆ ನೂರು ಮಕ್ಕಳಾಗುವಂತೆಯೂ ವರವನ್ನು ಕೊಟ್ಟನು. ಆಕೆಯು ಬಹುದೂರ ಬಂದಿರುವುದನ್ನು ನೋಡಿ ಹಿಂದಿರುಗುವುದಕ್ಕೆ ಹೇಳಿದನು. ಆಕೆಯು ಅದನ್ನು ತಿರಸ್ಕರಿಸಿ ಜ್ಞಾನಸಂಬಂಧವಾದ ಮಾತುಗಳನ್ನಾಡುತ್ತಾ ಯಮನು ಇನ್ನೊಂದು ವರವನ್ನು ಕೊಡಲು ಇಷ್ಟಪಡುವವರೆಗೂ ಅವನ ಹಿಂದೆಯೇಹೋಗಿ, "ಓ ಮಹಾತ್ಮನಾದ ವರಪ್ರದನೇ ! ನನ್ನ ಗಂಡನ ಪ್ರಾಣವನ್ನು ಕೇಳಿಕೊಳ್ಳುವೆನು. ಇಲ್ಲವಾದರೆ ನೀನು ನನಗೆ ನೂರು ಮಕ್ಕಳಾಗುವಂತೆ ಮೊದಲೇ ಕೊಟ್ಟ ವರವು ವ್ಯರ್ಥವಾಗುವುದು. ಆದುದರಿಂದ ಓ ಮಹಾರಾಜನೇ! ನಿನ್ನ ವಾಗ್ದಾನದಂತೆ ನನಗೆ ಮಕ್ಕಳಾಗುವುದಕ್ಕಾಗಿ ನನ್ನ ಗಂಡನ ಪ್ರಾಣವನ್ನು ಹಿಂದಕ್ಕೆ ಕೊಡು" ಎಂದು ಬೇಡಿಕೊಂಡಳು. ಯಮನು ಅವಳ ಪಾತಿವ್ರತ್ಯಕ್ಕೆ ಮೆಚ್ಚಿ ಸತ್ಯವಂತನ ಪ್ರಾಣವನ್ನು ಕೊಟ್ಟು "ಇವನು ನಾನೂರು ವರುಷಗಳು ಬದುಕಿ ನೂರು ಮಕ್ಕಳನ್ನು ಪಡೆಯುವನು" ಎಂದು ಹರಸಿದನು.

ಯಮನು ಹೊರಟುಹೋದಮೇಲೆ ಸಾವಿತ್ರಿಯು ತನ್ನಪತಿಯ ಶವವನ್ನು ಬಿಟ್ಟಿದ್ದ ಸ್ಥಳಕ್ಕೆ ಬಂದಳು. ಸತ್ಯವಂತನು ತನ್ನ ಕಣ್ಣುಗಳನ್ನು ತೆರೆದು ಪ್ರೀತಿಯಿಂದ ಸಾವಿತ್ರಿಯನ್ನು ನೋಡಿದನು. ಆದರೆ ಅವನಿಗೆ ನಡೆದ ಸಂಗತಿಯಾವುದೂ ತಿಳಿದಿರಲಿಲ್ಲ. ತಾನು ನಿದ್ರೆಯಲ್ಲಿದ್ದವನಂತೆಯೂ, ಯಮನ ವಿಷಯವಾದ ಸ್ವಪ್ನವನ್ನು ಕಂಡಂತೆಯೂ ಯೋಚಿಸಿದನು.

ಸಾವಿತ್ರಿಯು ಆಗ ಅವನಿಗೆ ಏನನ್ನೂ ಹೇಳಲಿಲ್ಲ. ಆದರೆ ಪ್ರೀತಿಯಿಂದಲೂ, ಎಚ್ಚರಿಕೆಯಿಂದಲೂ, ತನ್ನ ತಂದೆಯ ಆಶ್ರಮಕ್ಕೆ

ಬರಲು ಅವನಿಗೆ ಸಹಾಯಮಾಡಿದಳು. ಅಲ್ಲಿ ದ್ಯುಮತ್ಸೇನನು ತನ್ನ ದೃಷ್ಟಿಯನ್ನು ಹೊಂದಿ ಶಕ್ತಿವಂತನಾಗಿ ಚನ್ನಾಗಿದ್ದುದನ್ನು ಕಂಡರು. ರಾಜನು ಸತ್ಯವಂತನನ್ನು ಬಹಳಕಾಲದವರೆಗೂ ಬಾರದಿದ್ದುದಕ್ಕೆ ಕಾರಣವನ್ನು ಕೇಳಲು, ತಾನು ನಿದ್ರೆಯಲ್ಲಿದ್ದುದರಿಂದ ಯಾವುದನ್ನೂ ಹೇಳುವುದಕ್ಕಾಗುವದಿಲ್ಲವೆಂದು ಉತ್ತರಕೊಟ್ಟನು. ಅನಂತರದಲ್ಲಿ ಸಾವಿತ್ರಿಯು ಅಲ್ಲಿ ನಡೆದ ವಿಷಯಗಳನ್ನೆಲ್ಲಾ ಹೇಳಿದಳು. ಸ್ವಲ್ಪಕಾಲದಲ್ಲಿಯೇ ದ್ಯುಮತ್ಸೇನನ ರಾಜ್ಯದಿಂದ ಸೇವಕರು ಬಂದು ಆತನ ಶತ್ರುವು ಸತ್ತನೆಂತಲೂ, ಪ್ರಜೆಗಳೆಲ್ಲರೂ ದ್ಯುಮತ್ಸೇನನೇ ರಾಜನಾಗಬೇಕೆಂದು ಅಪೇಕ್ಷಿಸುವರೆಂತಲೂ, ಆತನಿಗೆ ಹೇಳಿದರು. ಆದುದರಿಂದ ದ್ಯುಮತ್ಸೇನನು ರಾಜನಾದನು. ಸತ್ಯವಂತನೂ, ಸಾವಿತ್ರಿಯೂ,ರಾಜಪುತ್ರ ರಾಜಪುತ್ರಿಯರಾದರು. ಕಾಲದಲ್ಲಿ ಸಾವಿತ್ರಿಯು 100 ಮಕ್ಕಳನ್ನು ಪಡೆದಳು. ಈ ರೀತಿಯಾಗಿ ಯಮನ ವರಗಳೆಲ್ಲವೂ ಫಲಿಸಿದವು. ಒಬ್ಬ ಪ್ರೀತಿಯುಳ್ಳ, ವಿಶ್ವಾಸದಿಂದ ಕೂಡಿದ, ಹೆಂಡತಿಯು ಯಮಧರ್ಮರಾಜನಿಂದ ತನ್ನ ಗಂಡನನ್ನು ಬದುಕಿಸುವುದಕ್ಕೂ ಸಂಸಾರಕ್ಕೆ ಅಭಿವೃದ್ಧಿಯನ್ನು ತರುವುದಕ್ಕೂ ಹೇಗೆ ಶಕ್ತಳಾಗಿದ್ದಳೆಂಬುದನ್ನು ನೀವು ನೋಡಿ.

ವಿಶ್ವಾಸವುಳ್ಳ ಹೆಂಡತಿಯ ಸತ್ಯವಾದ ಪ್ರೀತಿಯು ಮೃತ್ಯುಗಿಂತಲೂ ಬಲವಾದುದು.

ಸುಖವೂ, ಸಂತೋಷವೂ, ಧರ್ಮವೂ ಪ್ರತಿಯೊಂದೂ ಹೆಂಡತಿಯಮೇಲೆ ಆಧಾರವಾಗಿರುವುದೆಂದು ತಿಳಿದು, ಕೋಪದಲ್ಲಿದ್ದಾಗಲೂ ಸಹ ಯಾವ ಮನುಷ್ಯನೂ ತನ್ನ ಹೆಂಡತಿಗೆ ಬೇಡವಾದ ಯಾವ ಕೆಲಸವನ್ನೂ ಮಾಡಬಾರದು.

ಓ ರಾಜನೇ, ಸ್ತ್ರೀಯರನ್ನು ಗೌರವಿಸಬೇಕು ಮತ್ತು ಪ್ರೀತಿಯಿಂದ ಕಾಣಬೇಕು ಎಲ್ಲಿ ಸ್ತ್ರೀಯರಿಗೆ ಗೌರವವಿರುವುದೋ ಅಲ್ಲಿ ದೇವತೆಗಳು ಸಂತೋಷಪಡುವರು. ಎಲ್ಲಿ ಸ್ತ್ರೀಯರಿಗೆ ಗೌರವವಿಲ್ಲವೋ ಅಲ್ಲಿ ಕಾರ್ಯಗಳೆಲ್ಲವೂ ನಿಷ್ಪ್ರಯೋಜಕಗಳಾಗುತ್ತವೆ.

ಯಾವಳು ಮೃದುವಾದ ಮಾತುಗಳನ್ನಾಡುವಳೋ, ಯಾರ ಹೃದಯವು ತನ್ನ ಗಂಡನಿಗೆ ಅರ್ಪಿಸಲ್ಪಡುವುದೋ, ಯಾವಳು ಮನೆಯ ಕೆಲಸಗಳನ್ನೆಲ್ಲಾ ಸಂತೋಷದಿಂದ ಮಾಡುವಳೋ, ಯಾವಳು ತನ್ನ ಮನೆಯನ್ನು ನಿರ್ಮಳವಾಗಿಟ್ಟುಕೊಳ್ಳುವಳೋ, ಅಂಥವಳೇ ನಡತೆಯಲ್ಲಿ ನಿಜವಾಗಿಯೂ ಧರ್ಮಿಷ್ಠಳೆನಿಸುವಳು. ಯಾವ ಸ್ತ್ರೀಯು ಬ್ರಾಹ್ಮಣರನ್ನೂ, ಬಲಹೀನರನ್ನೂ, ಅಸಹಾಯರನ್ನೂ, ದುಃಖಪಡುವವರನ್ನೂ, ಕುರುಡರನ್ನೂ, ಬಡವರಾದವರನ್ನೂ, ಆಹಾರದಿಂದ ಸಂರಕ್ಷಿಸುತ್ತಾಳೋ, ಅವಳು ಬಹಳ ಪುಣ್ಯವನ್ನು ಸಂಪಾದಿಸುವಳು.

---

## ತಾಯಿತಂದೆಗಳಮೇಲೆ ಮಕ್ಕಳಿಗಿರುವಪ್ರೀತಿ (Filial Love)

ಮಕ್ಕಳಿಗೆ ತಾಯಿತಂದೆಗಳಮೇಲಿರುವ ಪ್ರೀತಿಗಿಂತ ಉತ್ತಮವಾದ ಪ್ರೀತಿಯೇ ಇಲ್ಲ. ತಾಯಿತಂದೆಗಳ ಮಾತು ವಿಧೇಯರಾದ ಬಾಲಕರಿಗೆ ದೇವರ ವಾಕ್ಯದಂತಿರುವುದು. ಮಕ್ಕಳು ತಾಯಿತಂದೆಗಳಿಗೆ ವಿಧೇಯರಾಗಿರಬೇಕೆಂದು ಎಲ್ಲಾ ಪವಿತ್ರವಾದ ಗ್ರಂಥಗಳಲ್ಲಿಯೂ ಹೇಳಿದೆ. ಪುರಾತನರಾದ ಶೂರರು ತಮ್ಮ ತಾಯಿತಂದೆಗಳಿಗೆ ಯಾವ ರೀತಿಯಲ್ಲಿ ವಿಧೇಯರಾಗಿದ್ದರೆಂಬ ವಿಷಯದಲ್ಲಿ ಅನೇಕ ಕಥೆಗಳಿವೆ. ಮಾತಾಪಿತೃಗಳ ಸೇವೆಯಿಂದ ಒಬ್ಬ ಮನುಷ್ಯನಿಗೆ ಜ್ಞಾನವೂ, ಒಳ್ಳೆಯತನವೂ ಹೇಗೆ ಲಭಿಸುವುವೆಂಬುದು ಈ ಮುಂದೆ ಹೇಳುವ ಒಬ್ಬ ವ್ಯಾಧನ ಕಥೆಯಿಂದ ತಿಳಿಯಬಹುದು.

ಒಂದಾನೊಂದು ಕಾಲದಲ್ಲಿ ಕಸಿಷ್ಕನೆಂಬ ಬ್ರಾಹ್ಮಣನಿದ್ದನು ಅವನು ಸಂಪೂರ್ಣವಾಗಿ ವೇದಾಧ್ಯಯನಮಾಡಿ ಅನೇಕ ವ್ರತಗಳನ್ನು ಮಾಡಿದ್ದರೂ ಧರ್ಮದಸ್ವರೂಪವು ಇಂಥದೆಂದು ಅವನಿಗೆ ತಿಳಿದಿರಲಿಲ್ಲ.

ಮಿಥಿಲಾ ಪಟ್ಟಣಕ್ಕೆ ಹೋದರೆ ಅಲ್ಲಿ ಅತ್ಯುತ್ತಮವಾದ ಧರ್ಮ
ಯಾವುದೆಂಬುದನ್ನು ತನಗೆ ಹೇಳುವ ಒಬ್ಬ ಬೇಡನಿರುವನೆಂದು ಅ
ಗೆ ಗೊತ್ತಾಯಿತು. ಅವನು ಪಟ್ಟಣದೊಳಕ್ಕೆ ಹೋಗಿ ಅಲ್ಲಿ ಸು
ರವಾದ ಅರಮನೆಗಳನ್ನೂ, ಧನಿಕರನ್ನೂ, ನೋಡಿದನು. ಅಲ್ಲಿ
ಯ ರಸ್ತೆಗಳೂ, ಅಂಗಡಿಗಳೂ ಇದ್ದವು. ಆ ಪಟ್ಟಣದಲ್ಲಿ ಜನಕ
ಜನು ರಾಜ್ಯಭಾರ ಮಾಡುತ್ತಿದ್ದನು. ಕನಿಷ್ಕನು ಧರ್ಮಿಷ್ಠನಾ
ಬೇಡನೆಲ್ಲಿರುವನೆಂದು ಕೇಳಿಕೊಂಡು ಹೋದನು. ಒಬ್ಬ ಬ್ರಾಹ್ಮ
ನು ಇವನಿಗೆ ಆ ಬೇಡನಿರುವ ಸ್ಥಳವನ್ನು ತೋರಿಸಿದನು. ಆಗ ವ
ಧನು ಅಂಗಡಿಯಲ್ಲಿ ಜಿಂಕೆಯ ಮತ್ತು ಎಮ್ಮೆಯ ಮಾಂಸವನ್ನು
ರುತ್ತಿದ್ದನು. ಇದನ್ನು ಕಂಡು ಬ್ರಾಹ್ಮಣನು ಅವನ ಸುತ್ತಲೂ
ರು ನಿಂತುಕೊಂಡಿದ್ದುದರಿಂದ ದೂರದಲ್ಲಿಯೇ ನಿಂತುಕೊಂಡನು.
ವ್ಯಾಧನು ತನ್ನನ್ನು ನೋಡುವುದಕ್ಕಾಗಿ ಬ್ರಾಹ್ಮಣನು ಬಂದಿರುವುದ
ತನ್ನ ಜ್ಞಾನದೃಷ್ಟಿಯಿಂದಲೇ ತಿಳಿದು ಆತನಸಮೀಪಕ್ಕೆ ಹೋಗಿ“ ಬ
ಹ್ಮಣಶ್ರೇಷ್ಠನೇ! ನೀನು ಏಕೆ ಬಂದಿರುವೆ ಎಂಬುದನ್ನು ನಾನು ತಿ
ರುವೆನು. ಇದು ನಿನಗೆ ಯೋಗ್ಯವಾದ ಸ್ಥಳವಲ್ಲ. ನನ್ನಸಂಗಡ ಮ
ಬಾ” ಎಂದು ಹೇಳಿದನು.

ವ್ಯಾಧನು ತಾನು ಬಂದ ಸಂಗತಿಯನ್ನು ತಿಳಿದು ಹೇಳಿದ
ಕ್ಕಾಗಿ ಬ್ರಾಹ್ಮಣನು ಆಶ್ಚರ್ಯಪಟ್ಟು ಸಂತೋಷದಿಂದ ಆತನ ಮ
ಹೋದನು. ವ್ಯಾಧನು ಆತನಿಗೆ ಅರ್ಘ್ಯಪಾದ್ಯಾಚಮನೀಯಗಳಿಗೆ ನ
ನ್ನು ಕೊಟ್ಟನು. ಆಮೇಲೆ ಬ್ರಾಹ್ಮಣನು “ನೀನು ಇಂತಹ ವ್ಯಾಪ
ದಲ್ಲೇಕೆ ಆಸಕ್ತನಾಗಿರುವೆ? ಮಾಂಸವನ್ನು ಮಾರುವುದು ನಿನಗೆ
ಚಿತವಾದುದಲ್ಲ” ಎಂದನು. ಆಗ ವ್ಯಾಧನು “ ಈ ವ್ಯಾಪಾರವು
ನ್ನ ವಂಶಪಾರಂಪರ್ಯವಾಗಿ ಬಂದಿರುವುದು. ಇದು ನನ್ನ ಜನ್ಮದಿ
ನನಗೆ ಬಂದ ಜಾತಿಧರ್ಮವಾಗಿದೆ. ನಾನು ಜಾಗರೂಕತೆಯಿಂದ

ಯರ ಸೇವೆಯನ್ನು ಮಾಡುತ್ತೇನೆ. ಸತ್ಯವನ್ನೇ ನುಡಿಯುತ್ತೇನೆ. ನನಗೆ ಪರರ ವಿಷಯದಲ್ಲಿ ಮಾತ್ಸರ್ಯವಿಲ್ಲ. ನಾನು ಮಾಂಸಾಹಾರವನ್ನು ಮಾಡುವುದಿಲ್ಲ. ನನ್ನ ದುಷ್ಕರ್ಮದಿಂದ ನಾನು ಈ ಜನ್ಮವನ್ನು ಹೊಂದಿರುವೆನು. ಲೋಕದಲ್ಲಿ ಮನುಷ್ಯನು ತನ್ನ ಸ್ವಾಭಾವಿಕವಾದ ಧರ್ಮವನ್ನು ಬಿಡುವುದು ಪಾಪಕರವಾದುದು.'' ಎಂದುಹೇಳಿ ಬಹಳಹೊತ್ತು ಬ್ರಾಹ್ಮಣನೊಡನೆ ಧರ್ಮದ ವಿಷಯವನ್ನೇ ಮಾತನಾಡುತ್ತಿದ್ದನು. ಆಮೇಲೆ ಬ್ರಾಹ್ಮಣನನ್ನು ಕುರಿತು ‘‘ ಎಲೈ ಬ್ರಾಹ್ಮಣನೇ, ನಾನು ಅತ್ಯಂತಸುಖವುಳ್ಳ ಈ ಸ್ಥಿತಿಯನ್ನು ಹೇಗೆ ಸಂಪಾದಿಸಿದೆನೆಂಬುದನ್ನು ಪ್ರತ್ಯಕ್ಷವಾಗಿ ನೋಡಬೇಕಾದರೆ ನನ್ನೊಡನೆ ಈ ಒಳಗಿನ ಕೊಠಡಿಗೆ ಬಾ'' ಎಂದು ಹೇಳಿ ಆತನನ್ನು ಸುಖವಾದ ಆಸನಗಳೂ, ಒಳ್ಳೆಯಹೂಗಳೂ, ಸುಗಂಧದ್ರವ್ಯಗಳೂ, ತುಂಬಿರುವ ಸುಂದರವಾದೊಂದು ಕೊಠಡಿಯೊಳಕ್ಕೆ ಕರೆದುಕೊಂಡುಹೋದನು. ಅಲ್ಲಿ ಶುಭ್ರವಸ್ತ್ರಗಳನ್ನು ಧರಿಸಿದ್ದ ವ್ಯಾಧನ ತಂದೆತಾಯಿಗಳು ಸುಖವಾಗಿ ಕುಳಿತಿದ್ದರು. ವ್ಯಾಧನು ಅವರಿಗೆ ನಮಸ್ಕಾರಮಾಡಿದನು. ಆಗ ಆ ವೃದ್ಧರು ಅವನಿಗೆ ಆಶೀರ್ವಾದವನ್ನುಮಾಡಿ ‘‘ ಎಲೈಪುತ್ರನೇ, ಜಮದಗ್ನಿಯ ಮಗನಾದ ರಾಮನು ತನ್ನ ವೃದ್ಧರಾದ ಮಾತಾಪಿತೃಗಳನ್ನು ಸಂತೋಷಪಡಿಸಲು ಎಷ್ಟು ಕಷ್ಟಪಟ್ಟನೋ, ಅದಕ್ಕಿಂತ ಹೆಚ್ಚಾಗಿ ನೀನು ನಮ್ಮನ್ನು ಸಂತೋಷಪಡಿಸುವುದಕ್ಕಾಗಿ ಕಷ್ಟಪಟ್ಟಿರುವೆ" ಎಂದು ಹೇಳಿದರು. ಆಗ ಆ ವ್ಯಾಧನು ಬ್ರಾಹ್ಮಣನನ್ನು ಅವರಿಗೆ ತೋರಿಸಿದನು. ಅವರು ಆತನಿಗೆ ನಮಸ್ಕರಿಸಿ ಅವನ ಸುಖಾಗಮನವನ್ನು ವಿಚಾರಿಸಿದರು. ಬ್ರಾಹ್ಮಣನೂ ಅವರಕ್ಷೇಮಲಾಭವನ್ನು ವಿಚಾರಿಸಿದನು. ಆಮೇಲೆ ವ್ಯಾಧನು ‘‘ಮಹಾತ್ಮನೇ, ಇವರೇ ನನ್ನ ತಾಯಿತಂದೆಗಳು. ನಾನು ಪೂಜಿಸುವ ದೇವರೇ ಇವರು. ದೇವತೆಗಳಿಗೆ ಏನನ್ನು ಸಮರ್ಪಿಸಬೇಕೋ ಅದನ್ನು ಇವರಿಗೆ ಕೊಡುವೆನು. ನಾನು ಯಾವಾಗಲೂ ಇವರನ್ನು ಸಂತೋಷ

ಪಡಿಸಲು ಪ್ರಯತ್ನಪಡುತ್ತೇನೆ. ಇವರು ನನಗೆ ಮೂರು ಅಗ್ನಿಗಳಂತೆಯೂ, ಯಜ್ಞಸ್ವರೂಪವಾಗಿಯೂ, ವೇದಗಳಂತೆಯೂ, ಇರುವರು. ನನಗಿರುವುದೆಲ್ಲವೂ ಅವರಸೇವೆಗೋಸ್ಕರವೇ. ನಾನು ಅವರಪಾದಗಳನ್ನು ತೊಳೆದು ಆಹಾರವನ್ನು ಕೊಡುತ್ತೇನೆ. ಅವರೇ ನನ್ನ ಗುರುಶ್ರೇಷ್ಠರು. ಈ ಧರ್ಮದಿಂದಲೆ ನಾನು ಆತ್ಮಜ್ಞಾನವನ್ನು ಸಂಪಾದಿಸಿದೆನು. ಇದೇ ಮಿಥಿಲಾಪಟ್ಟಣದ ವ್ಯಾಧನಾದ ನನ್ನಿಂದ ತಿಳಿಯಬೇಕೆಂದಿದ್ದ ಧರ್ಮವು. ನಿನ್ನ ಮಾತಾಪಿತೃಗಳ ಬಳಿಗೆ ಹೋಗು. ಅವರು ಬಹಳವೃದ್ಧರು. ನಿನ್ನನ್ನಗಲಿ ಬಹಳ ದುಃಖಪಡುತ್ತಿರುವರು. ನೀನು ಅವರನ್ನು ಬಿಟ್ಟಿರುವುದು ಒಳ್ಳೆಯದಲ್ಲ. ನಾವಕಾಶಮಾಡದೆ ಅವರಬಳಿಗೆಹೋಗಿ 'ಅವರ ದುಃಖವನ್ನು ನಿವಾರಿಸು. ಮಾತಾಪಿತೃಗಳ ಭಕ್ತಿಯ ವಿಷಯದಲ್ಲಿ ನೀನು ಜಾಗ್ರತೆಯುಳ್ಳವನಾಗಿಯೂ, ವಿವೇಕಿಯಾಗಿಯೂ, ಇರು. ಇದಕ್ಕಿಂತ ಹೆಚ್ಚಾದ ಧರ್ಮವೇ ಇಲ್ಲ. ಗೃಹಸ್ಥಾಶ್ರಮದಲ್ಲಿರುವವರಿಗೆ ಇದು ಮುಖ್ಯವಾದ ಧರ್ಮವು'' ಎಂದು ಹೇಳಿದನು. ಆಮೇಲೆ ಬ್ರಾಹ್ಮಣನು ವ್ಯಾಧನನ್ನು ವಂದಿಸಿ ಹೋಗಿಬರುವೆನೆಂದು ಅವನಿಗೆ ಹೇಳಿದನು. ಆಮೇಲೆ ತನ್ನಮನೆಗೆಬಂದು ಆ ದಿನಮೊದಲ್ಗೊಂಡು ವೃದ್ಧರಾದ ತನ್ನ ತಾಯಿತಂದೆಗಳನ್ನು ಎಚ್ಚರಿಕೆಯಿಂದಲೂ, ವಿವೇಕದಿಂದಲೂ, ಸೇವಿಸುತ್ತಿದ್ದನು.

ಪದ್ಯ ||

ಆಟವೊಳು ಕಾಲವನು ಕಳೆಯದೆ |
ಸೂಟಿಯೊಳಗನುದಿನವು ಕಲಿಯುತ |
ಪಾಟವದೊಳೆಲ್ಲವನು ಮಾಡುವೆನೆಂಬ ನಿಯಮದೊಳು ||
ಕೋಟಿಯಡರೊದವಿದರು ಯತ್ನದೆ |
ದಾಟುತವುಗಳನೆಲ್ಲ ಸೌಖ್ಯವ |
ನಾಟಸುವೆನೆನುತೊರ್ವ ಬಾಲನು ನುಡಿದನೊಲವಿಂದ ||



# ಪುರುವಿನ ವಿಧೇಯತೆ.

ಪೂರ್ವಕಾಲದಲ್ಲಿ ಯಯಾತಿಯೆಂಬ ರಾಜನಿದ್ದನು. ಅವನು ತನ್ನ ದುಷ್ಕೃತ್ಯದಿಂದ ರೋಗಪೀಡಿತನಾಗಿ ತನಗೆ ವಯಸ್ಸಾಗದಿದ್ದರೂ ಬಹಳ ವೃದ್ಧನಾದನು. ಅವನ ಕೂದಲು ಬೆಳ್ಳಗಾಗಿದ್ದವು. ಆತನ ಮುಖದಲ್ಲಿ ಸುಕ್ಕುಗಳುಂಟಾದವು. ಸುಲಭವಾಗಿ ನಡೆಯುವುದಾಗಲೀ, ಯಾವುದರಿಂದಲಾದರೂ ಸೌಖ್ಯವನ್ನು ಹೊಂದುವುದಾಗಲೀ, ಅವನಿಗೆ ಅಸಾಧ್ಯವಾಗಿತ್ತು. ಅವನು ಕಷ್ಟಪಡುತ್ತಿದ್ದುದಲ್ಲದೆ ತಾನು ಪಾಪಕೃತ್ಯವನ್ನು ಮಾಡಿದುದಕ್ಕಾಗಿ ದುಃಖವನ್ನೂ ಹೊಂದಿದ್ದನು. ಇದನ್ನು ನೋಡಿ ಒಬ್ಬ ಬ್ರಾಹ್ಮಣನು ‟ನಿನ್ನ ಮಕ್ಕಳಲ್ಲಿ ಒಬ್ಬನು ನಿನ್ನ ವಾರ್ಧಕವನ್ನು ತೆಗೆದುಕೊಂಡು ಅವನು ವೃದ್ಧನಾದರೆ ನಿನಗೆ ಯೌವನವೂ ಸೌಖ್ಯವೂ ಉಂಟಾಗುವುದು. ನಿನ್ನ ಮಗನು ಇದಕ್ಕೆ ಒಪ್ಪಿದರೆ 1000 ವರ್ಷಗಳಮೇಲೆ ಅವನುತನ್ನ ಯೌವನವನ್ನು ಪುನಃ ಹೊಂದಬಹುದು. ಇಷ್ಟಲ್ಲದೆ ಅಧಿಕವಾದ ಕೀರ್ತಿಯನ್ನೂ, ದೀರ್ಘಾಯುಷ್ಯವನ್ನೂ, ಅನೇಕ ಮಕ್ಕಳನ್ನೂ, ಪಡೆಯುವನು.'' ಎಂದು ಹೇಳಿದನು.

ಯಯಾತಿಗೆ 5 ಜನ ಗಂಡುಮಕ್ಕಳಿದ್ದರು. ಅವನು ತನ್ನ ಹಿರಿಯ ಮಗನನ್ನುಕರೆದು‟ ಮಗುವೇ, ದುಷ್ಕಾರ್ಯದಿಂದ ಮುದುಕನಾದಂತೆ ಕಾಣಿಸುತ್ತೇನೆ. ನನಗೆ ಯೌವನದ ಸೌಖ್ಯಗಳನ್ನು ಅನುಭವಿಸಲು ಇನ್ನೂ ಆಶೆಯಿದೆ. ಮಗುವೇ, ನೀನು ನನ್ನ ಮುಪ್ಪನ್ನು 1000 ವರುಷಗಳವರೆಗೆ ತೆಗೆದುಕೊಳ್ಳುವಿಯಾ. 1000 ವರ್ಷಗಳ ಮೇಲೆ ನನ್ನ ವಾರ್ಧಕವನ್ನೂ, ಬಲಹೀನತೆಯನ್ನೂ, ಪುನಃ ತೆಗೆದುಕೊಂಡು ನಿನ್ನ ಯೌವನವನ್ನೂ, ಶಕ್ತಿಯನ್ನೂ ನಿನಗೆ ಕೊಟ್ಟುಬಿಡುವೆನು '' ಎಂದು ಹೇಳಿದನು. ಆದರೆ ಯದುವು ತಿರಸ್ಕಾರಮಾಡಿ, ‟ವಾರ್ಧಕದಲ್ಲಿ ಅನೇಕ ವಿಷಯಗಳು ಸಂತೋಷಕರವಾಗಿರುವುದಿಲ್ಲ. ನಿನಗೆ ಇತರಮಕ್ಕಳಿರುವರು.

ಓ ರಾಜನೇ, ಬೇರೊಬ್ಬಮಗನನ್ನು ಕೇಳು'' ಎಂದು ಅಲ್ಲಿಂದ ಹೊರಟು ಹೋದನು.

ಅನಂತರದಲ್ಲಿ ಯಯಾತಿಯು ತನ್ನ ಎರಡನೆಯಮಗನಾದ ತುರ್ವಸುವನ್ನು ಕೇಳಿದನು. ಅವನು ''ಓ ತಂದೆಯೇ, ನನಗೆ ಮುಪ್ಪು ಇಷ್ಟವಿಲ್ಲ'' ಎಂದು ತಿರಸ್ಕರಿಸಿ ಹೊರಟುಹೋದನು. ಆಮೇಲೆ ಯಯಾತಿಯು ತನ್ನ ಮೂರನೆಯಮಗನಾದ ದ್ರುಹ್ಯುವನ್ನು ಕರೆದು ''ನಿನ್ನ ಯೌವನವನ್ನು ಕೊಡುತ್ತೀಯಾ'' ಎಂದು ಕೇಳಲು ದ್ರುಹ್ಯುವು ಮುಪ್ಪಿನಲ್ಲಿ ಯಾರು ಕುದುರೆ ಮತ್ತು ಆನೆಗಳಮೇಲೆ ಸವಾರಿ ಮಾಡುವರು? ಅಥವಾ ಇತರವಿಧವಾದ ಸೌಖ್ಯವನ್ನು ಯಾರುತಾನೆ ಅನುಭವಿಸಲಿಕ್ಕಾದೀತು? ಎಂದು ತಿರಸ್ಕಾರಮಾಡಿ ಹೊರಟುಹೋದನು.

ಅನಂತರದಲ್ಲಿ ರಾಜನು ತನ್ನ ನಾಲ್ಕನೆಯ ಪುತ್ರನನ್ನು ಕರೆದು ''ಓ ಅಣು, ನನ್ನ ಮುಪ್ಪನ್ನು 1000 ವರ್ಷಗಳವರೆಗೆ ನೀನು ತೆಗೆದುಕೊಂಡು ನಿನ್ನ ಯೌವನವನ್ನು ನನಗೆ ಕೊಡು'' ಎಂದು ಕೇಳಿದನು. ಆಗ ಅಣುವು ''ವೃದ್ಧರು ಮಕ್ಕಳಂತೆ ಇರುವರು. ಅವರು ಶುದ್ಧರಲ್ಲ. ಸಕಾಲದಲ್ಲಿ ಯಜ್ಞವನ್ನು ಮಾಡಲಾರರು. ಆದುದರಿಂದ ನಾನು ನಿನ್ನ ಮುಪ್ಪನ್ನು ತೆಗೆದುಕೊಳ್ಳಲಾರೆನು.'' ಎಂದುಹೇಳಿ ಹೊರಟುಹೋದನು.

ಆಮೇಲೆ ಒಬ್ಬನೇ ಮಗನುಳಿದನು. ಅವನೇ ಯಯಾತಿಯ ಕಿರಿಯಮಗನಾದ ಪುರುವು. ಯಯಾತಿಯು ಅವನ ಕಡೆಗೆ ತಿರುಗಿ ''ಓ ಪುರೂ, ನೀನು ನನಗೆ ಪ್ರೀತಿಪಾತ್ರನಾದ ಕಿರಿಯಮಗನು. ನೀನು ನನ್ನ ವಾರ್ಧಕವನ್ನು ತೆಗೆದುಕೊಂಡು ನಿನ್ನ ಯೌವನವನ್ನು ಕೊಡುವಿಯಾ?'' ಎಂದು ಕೇಳಿದನು. ಪುರುವುರಾಜನ ಮಾತುಗಳನ್ನು ಕೇಳಿ ವಿಧೇಯತೆಯಿಂದ ನಮಸ್ಕರಿಸಿ '' ಓ ಮಹಾತ್ಮನಾದ ರಾಜನೇ, ನಿನ್ನ

ಇಷ್ಟದಂತೆ ನಿನ್ನ ಮುಪ್ಪನ್ನೂ, ದುರ್ಬಲವನ್ನೂ, ನಾನು ತೆಗೆದು ಕೊಂಡು ನನ್ನ ಯೌವನವನ್ನು ನಿನಗೆ ಕೊಡುವೆನು.'' ಎಂದು ಹೇಳಿದನು.

ಯಯಾತಿಯು ಬಲವುಳ್ಳ ಪ್ರಾಯದವನಾದನು. ಪುರುವು ಬಲಹೀನನಾಗಿಯೂ, ವೃದ್ಧನಾಗಿಯೂ ಆದನು.

ಹೀಗೆ 1000 ವರ್ಷಗಳು ಕಳೆದುವು. ಈ ಕಾಲದಲ್ಲಿ ಯಯಾತಿಯು ಯೌವನವನ್ನೂ, ಶಕ್ತಿಯನ್ನೂ ಅನುಭವಿಸಿದನು. ತನ್ನ ಪ್ರಜೆಗಳನ್ನು ಚನ್ನಾಗಿ ಆಳಿ ದೇವತೆಗಳನ್ನು ಸಂತೋಷಪಡಿಸಿ ಬಲಹೀನರನ್ನು ಸಂರಕ್ಷಿಸಿದನು. 1000 ವರ್ಷಗಳು ಕಳೆದಮೇಲೆ ಯಯಾತಿಯು ಪುರುವನ್ನು ಕರೆಕಳುಹಿಸಿ '' ಓ ನನ್ನ ಪ್ರಿಯಪುತ್ರನೇ, ನೀನು ನನಗೆ ಕೊಟ್ಟ ಶಕ್ತಿಯಿಂದ ಎಲ್ಲಾ ಸುಖಗಳನ್ನೂ ಅನುಭವಿಸಿದೆನು. ಮತ್ತು

ನಜಾತುಕಾಮಃ ಕಾಮಾನಾಮುಪಭೋಗೇನಶಾಮ್ಯತಿ ||
ಹವಿಷಾಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೆ ||

ಎಂಬಂತೆ ಆಶಾರಹಿತನಾಗಿರುವುದೇ ಸುಖವೆಂಬುದನ್ನು ಕಲಿತುಕೊಂಡೆನು. ಓ ಪುರುವೇ, ನಿನ್ನಲ್ಲಿ ನನ್ನ ಸಂತೋಷವು ಅತ್ಯಧಿಕವಾಗಿರುವುದು. ನೀನು ಸುಖವಾಗಿರು. ನಿನ್ನ ಯೌವನವನ್ನು ನೀನು ಹಿಂದಿರುಗಿ ತೆಗೆದುಕೋ. ನನ್ನ ಉಳಿದಕಾಲವನ್ನು ಅರಣ್ಯದಲ್ಲಿ ಕಳೆವೆನು. ನನ್ನ ರಾಜ್ಯವನ್ನು ತೆಗೆದುಕೋ. ನೀನು ನನ್ನ ಇಷ್ಟದಂತೆ ನಡೆದುದರಿಂದ ನೀನೇ ನನ್ನ ನಿಜವಾದ ಮಗನು.'' ಎಂದು ಹೇಳಿದನು. ಈ ರೀತಿಯಾಗಿ ಪುರುವು ತನ್ನ ಯೌವನವನ್ನು ತೆಗೆದುಕೊಂಡನು! ಯಯಾತಿಯು ಪುನಃ ವೃದ್ಧನಾದನು.

ಯಯಾತಿಯು ತನ್ನ ಕಿರಿಯಮಗನಾದ ಪುರುವನ್ನು ಸಿಂಹಾಸನದಮೇಲೆ ಕೂರಿಸಲು ಅಪೇಕ್ಷಿಸಿದನು. ಆದರೆ ಕೆಲವುಜನರು ಅತನ

ಸಮೀಪಕ್ಕೆಬಂದು “ ಓ ಸ್ವಾಮಿಯೇ, ನಿನ್ನ ಕಿರಿಯಮಗನನ್ನು ಸಿಂಹಾಸನದಮೇಲೆ ಕುಳ್ಳಿರಿಸಿ ಹಿರಿಯಮಗನನ್ನೂ, ಇತರ ಮಕ್ಕಳನ್ನೂ, ಬಿಡುವುದು ಯುಕ್ತವಲ್ಲ. ಧರ್ಮದ ಕಟ್ಟಳೆಗೆ ಸರಿಯಾಗಿ ನಡೆಯಬೇಕೆಂದು ಹೇಳಿದರು.

ಅನಂತರದಲ್ಲಿ ಯಯಾತಿಯು “ಚತುರ್ವರ್ಣದವರಾದ ನೀವೆಲ್ಲರೂ ಕೇಳಿ. ಯಾವ ಕಾರಣದಿಂದ ನನ್ನ ಹಿರಿಯಮಗನಿಗಾಗಲೀ, ಇತರ ಮಕ್ಕಳಿಗಾಗಲೀ, ರಾಜ್ಯವನ್ನು ಕೊಡಬಾರದೆಂದರೆ:—ನನ್ನ ಹಿರಿಯಮಗನೂ, ಇತರಮಕ್ಕಳೂ, ನನ್ನ ಆಜ್ಞೆಯನ್ನು ವಿಾರಿನಡೆದರು. ತನ್ನ ತಂದೆಗೆ ಅವಿಧೇಯನಾಗಿರುವ ಮಗನು ಮಗನೇ ಅಲ್ಲವೆಂದು ಜ್ಞಾನಿಗಳು ಹೇಳುತ್ತಾರೆ. ತನ್ನ ತಾಯಿತಂದೆಗಳ ಕ್ಷೇಮವನ್ನು ಕೋರುವ ಮತ್ತು ಅವರನ್ನು ಪ್ರೀತಿಸುವ ಪುತ್ರನೇ ಪುತ್ರರಲ್ಲೆಲ್ಲ ಅತ್ಯಂತ ಉತ್ತಮನು. ಪುರು ಒಬ್ಬನೇ ನನ್ನ ಆಜ್ಞೆಯಂತೆ ನಡೆದಿರುವನು. ಅವನಿಂದ ನಾನು ಗೌರವವನ್ನು ಹೊಂದಿದೆನು. ಆದುದರಿಂದ ಅವನು ಕಿರಿಯವನಾದಾಗ್ಯೂ ಅವನೇ ರಾಜನಾಗಬೇಕು. ” ಎಂದು ಹೇಳಿದನು.

ಈ ಮಾತನ್ನುಕೇಳಿ ಬ್ರಾಹ್ಮಣರೇ ಮೊದಲಾದ ಪ್ರಜೆಗಳೆಲ್ಲರೂ “ ಓ ರಾಜನೇ. ಕಿರಿಯವನಾದರೂ ತನ್ನ ತಾಯ್ತಂದೆಗಳ ಇಷ್ಟವನ್ನು ನೆರವೇರಿಸಿದವನೇ ರಾಜನಾಗಬೇಕು. ಎಂಬುದು ಸತ್ಯವಾದುದು. ” ಎಂದು ಹೇಳಿದರು ಆಮೇಲೆ ಯಯಾತಿಯು ಪುರುವಿಗೆ ರಾಜ್ಯವನ್ನು ಕೊಟ್ಟು ಅರಣ್ಯದಲ್ಲಿ ವಾಸಮಾಡುವುದಕ್ಕೆ ಹೊರಟುಹೋದನು.

---

## ರಾಮಚಂದ್ರನ ವಿಧೇಯತೆ.

ದಶರಥರಾಯನು ರಾಮಚಂದ್ರನ ತಂದೆಯು. ರಾಮಾಯಣದಲ್ಲಿ ಈ ಪ್ರಸಿದ್ಧರಾಜನ ಸತ್ಸ್ವಭಾವವೂ, ಭಗವದ್ಭಕ್ತಿಯೂ, ವಿಶದ

ವಾಗಿ ಹೇಳಿದೆ. ರಾಮಚಂದ್ರನು ಹುಡುಗನಾಗಿದ್ದರೂ, ವಿದ್ಯಾವಂತನಾಗಿಯೂ, ಸತ್ಯವಂತನಾಗಿಯೂ, ದಯಾಳುವಾಗಿಯೂ, ಕೆಲಸದಲ್ಲಿ ಚತುರನಾಗಿಯೂ ಇದ್ದನು. ತನ್ನ ಮಗನ ಸದ್ಗುಣಗಳನ್ನು ನೋಡಿ ದಶರಥನು ತನ್ನ ಸ್ಥಾನದಲ್ಲಿ ರಾಮನು ರಾಜನಾಗಿ ರಾಜ್ಯಭಾರವನ್ನು ಮಾಡುವುದನ್ನು ನೋಡಬೇಕೆಂದು ಅಪೇಕ್ಷಿಸಿದನು. ಮತ್ತು ತನಗೆ ವಯಸ್ಸಾಗುತ್ತಾ ಬಂದುದರಿಂದ ವಿಶ್ರಾಂತಿಯನ್ನು ಹೊಂದಬೇಕೆಂದು ಆಶಿಸಿದನು.

ಎಲ್ಲಾ ಸೇನಾಪತಿಗಳೂ, ಸಾಮಾಜಿಕರೂ, ರಾಮನು ರಾಜ್ಯವನ್ನಾಳಲು ಅರ್ಹನೆಂದು ಒಪ್ಪಿಕೊಂಡರು. ತನ್ನ ಪೂರ್ವಿಕರ ಸಿಂಹಾಸನದಮೇಲೆ ರಾಮನನ್ನು ಕುಳ್ಳಿರಿಸುವುದಕ್ಕೋಸ್ಕರ ಬೇಕಾದ ಉಪಕರಣಗಳು ಸಿದ್ಧವಾದುವು. ಇದನ್ನು ನೋಡಿ ಎಲ್ಲರೂ ಆನಂದಪಡುತಿದ್ದರು.

ಆದರೆ ಸಂತೋಷಪಡದಿದ್ದವಳೊಬ್ಬಳಿದ್ದಳು. ಅವಳೇ ರಾಜನ ಪತ್ನಿಯೂ, ಭರತನ ತಾಯಿಯೂ, ಆದ ಕೈಕೆಯು. ಅವಳಿಗೆ ರಾಮನು ರಾಜ್ಯವನ್ನಾಳುವ ವಿಷಯದಲ್ಲಿ ಮಾತ್ಸರ್ಯವಿದ್ದಿತು. ತನ್ನ ಮಗನಾದ ಭರತನು ರಾಜ್ಯವಾಳಬೇಕೆಂದು ಅವಳಾಶೆ. ರಾಜನಿಗೆ ಕೈಕೆಯ ಮೇಲೆ ಬಹಳ ಪ್ರೀತಿಯಿತ್ತು. ಒಂದಾವೃತ್ತಿ ಅವನು ಯುದ್ಧದಲ್ಲಿ ಗಾಯವನ್ನು ಹೊಂದಿದ್ದನು. ಆಗ ಕೈಕೆಯು ಅವನ ಸಮೀಪದಲ್ಲಿದ್ದು, ಉಪಚರಿಸಿ, ರಾಜನು ತನಗೆ ಎರಡು ವರಗಳನ್ನು ಕೊಡುತ್ತೇನೆಂಬ ವಾಗ್ದಾನವನ್ನು ಪಡೆದಿದ್ದಳು.

ಕೈಕೆಯು ಆಗ ಏನನ್ನೂ ಕೇಳಲಿಲ್ಲ. ಆದರೆ ಈ ವಾಗ್ದಾನವು ಈಗ ಅವಳ ನೆನಪಿಗೆ ಬಂದಿತು. ಅವಳು ಬಹಳವಾಗಿ ಅಳುವುದಕ್ಕೆ ಪ್ರಾರಂಭಿಸಿದಳು. ರಾಜನು ಬಂದಾಗ ಇವಳನ್ನು ನೋಡಿ ಚಿಂತಾಕ್ರಾಂತನಾಗಿ ಅವಳನ್ನು ಸಮಾಧಾನಪಡಿಸುವುದಕ್ಕೆ ಪ್ರಯತ್ನಪಟ್ಟನು.

ಆಗ ಅವಳು ತನಗೆ ರಾಜನು ಎರಡು ವರಗಳನ್ನು ಕೊಡುತ್ತೇನೆಂದು ಹೇಳಿದ್ದ ವಾಗ್ದಾನವನ್ನು ಜ್ಞಾಪಿಸಿದಳು. ಆಗ ದಶರಥನು ರಾಮನಾಣೆ ನಿನ್ನ ಇಷ್ಟವನ್ನು ನೆರವೇರಿಸುವೆನೆಂದು ಹೇಳಿದನು. ಆಮೇಲೆ ಅವಳು ‘‘ರಾಜನು ವಾಗ್ದಾನಮಾಡಿರುವನು’’ ಎಂದು ಹೇಳಿ ರಾಮನ ಬದಲಾಗಿ ಭರತನಿಗೆ ಪಟ್ಟಾಭಿಷೇಕವಾಗಬೇಕೆಂತಲೂ, ಆ ದಿವಸವೇ ರಾಮನು ಭಿಕ್ಷುಕನಾಗಿ ಹದಿನಾಲ್ಕು ವರ್ಷಗಳವರೆಗೆ ಕಾಡಿನಲ್ಲಿ ವಾಸ ಮಾಡುವುದಕ್ಕೋಸ್ಕರ ಹೋಗಬೇಕೆಂತಲೂ, ಹೇಳಿದಳು. ಅಯ್ಯೋ! ಈ ಮಾತನ್ನು ಕೇಳಿದಾಗ ದಶರಥನಿಗೆಷ್ಟು ಸಂತಾಪವಾಯ್ತು! ತಾನು ವಾಗ್ದಾನಕೊಟ್ಟದ್ದಕ್ಕಾಗಿ ಎಷ್ಟು ದುಃಖಪಟ್ಟನು! ಮೊದಲು ಕೈಕೆಯಮೇಲೆ ಕೋಪವುಳ್ಳವನಾದನು. ಆದರೆ ಅವಳು ‘‘ರಾಜನು ವಾಗ್ದಾನಮಾಡಿರುವನು.’’ ಎಂಬ ಮಾತನ್ನು ಮಾತ್ರ ಹೇಳಿದಳು. ಅನಂತರದಲ್ಲಿ ರಾಜನು ಆಕೆಯನ್ನು ದಯೆಯಿಡೆಂದು ಬೇಡಿಕೊಂಡನು. ಆದರೂ ಅವಳು ಒಪ್ಪದಿದ್ದುದರಿಂದ ರಾಮನನ್ನು ಕಾಡಿಗೆ ಕಳುಹಿಸಬೇಕಾಯ್ತು. ಭರತನಿಗೆ ಪಟ್ಟಾಭಿಷೇಕವಾಗಬೇಕಾಯ್ತು.

ಆರಾತ್ರಿಯೂ ಕಳೆಯಿತು. ಪ್ರಾತಃಕಾಲದಲ್ಲಿ ಒಬ್ಬ ದೂತನು ಬಂದು ರಾಮನ ಪಟ್ಟಾಭಿಷೇಕಕ್ಕೆ ಎಲ್ಲವೂ ಸಿದ್ಧವಾಗಿರುವುದೆಂದು ಹೇಳಿದನು. ರಾಜನು ಮೌನವಾಗಿದ್ದನು. ರಾಮನಿಗೆ ಈ ಭಯಂಕರವಾದ ವರ್ತಮಾನವನ್ನು ಹೇಗೆತಾನೆ ಹೇಳುವನು? ರಾಣಿಯಾದ ಕೈಕಾದೇವಿಯು ರಾಮನನ್ನು ರಾಜನಬಳಿಗೆ ಕರೆತರುವಂತೆ ದೂತನಿಗೆ ಹೇಳಿದಳು. ದಶರಥನೂ ಬಹಳ ದುಃಖದಿಂದ ‘‘ಹೌದು ಘನತೆಯುಳ್ಳ ಶ್ರೀರಾಮನನ್ನು ನನ್ನ ಬಳಿಗೆ ಕಳುಹಿಸು. ನಾನು ಅವನನ್ನು ನೋಡಬೇಕು.’’ ಎಂದನು.

ರಾಮನು ಸಂತೋಷದಿಂದ ತನ್ನ ತಂದೆಯಬಳಿಗೆ ಹೋಗಿ ಪ್ರೀತಿಯಿಂದ ಅವನಿಗೂ, ಕೈಕೆಗೂ ನಮಸ್ಕರಿಸಿದನು. ರಾಮನು ಅತಿ

ದುಃಖದಿಂದ "ರಾಮ" ಎಂದು ಒಂದು ಶಬ್ದವನ್ನು ಹೇಳಿ ಮುಂದೆ ಮಾತನಾಡಲು ಶಕ್ತನಾಗಲಿಲ್ಲ. ರಾಮನು ರಾಜನು ಅಷ್ಟು ದುಃಖ ದಲ್ಲಿರುವುದನ್ನು ನೋಡಿ ಬಹಳ ತೊಂದರೆಪಟ್ಟನು. ಏಕೆಂದರೆ, ಅಜ್ಞಾ ನದಿಂದ ತಂದೆಗೆ ಕೋಪಬರುವಂಥಹ ಕೆಲಸವನ್ನೇನಾದರೂ ಮಾಡಿರ ಬಹುದೆಂದು ಹೆದರಿದನು. ನಾನು ಏನುಮಾಡಿರುವೆನೆಂದು ರಾಜನನ್ನು ಕೇಳಲು ಕೈಕೆಯು "ನಿನ್ನ ತಂದೆಯು ಕೋಪಗೊಂಡಿಲ್ಲ. ನೀನು ನಡೆ ಸಬೇಕಾದ ಒಂದು ವಿಷಯವನ್ನು ವಾಗ್ದಾನಮಾಡಿರುವನು. ಅದನ್ನು ನಿನಗೆ ಹೇಳಲು ಇಷ್ಟವಿಲ್ಲದಿರುವನು. ರಾಜನು ಮಾತುಕೊಟ್ಟಿರುವಂತೆ ನೀನು ನಡೆಸುವುದಾದರೆ ನಾನು ಎಲ್ಲವನ್ನೂ ಹೇಳುವೆನು" ಎಂದಳು.

ಆಗ ರಾಮನು ಕುತೂಹಲದಿಂದ "ತಂದೆಯ ಇಚ್ಛೆಯಂತೆ ನಡೆ ಸುವೆನು. ರಾಜನ ಇಷ್ಟವು ಆ ರೀತಿಯಲ್ಲಿದ್ದರೆ ರಾಮನು ತನ್ನ ದೇಹ ವನ್ನು ಅಗ್ನಿಗೆ ಕೊಡುವನು. ವಿಷವನ್ನಾದರೂ ಕುಡಿಯುವನು. ಅಥ ವಾ ನೀರಿನಲ್ಲಾದರೂ ಬೀಳುವನು. ಈಗ ನಾನು ಯಾವ ಕೆಲಸವನ್ನು ಮಾಡಬೇಕು. ನನ್ನ ತಂದೆಯ ಅಪೇಕ್ಷೆಯು ಏನಿರುವುದು ?" ಎಂದು ಕೇಳಿದನು. ಆಮೇಲೆ ಕೈಕೆಯು "ಭರತನು ಪಟ್ಟಾಭಿಷಿಕ್ತನಾಗ ಬೇಕು. ರಾಮನಾದ ನೀನು ಕಾಡಿಗೆ ಹೋಗಬೇಕು." ಎಂದು ತನಗೆ ಕೊಟ್ಟ ಎರಡುವರಗಳ ವಿಷಯವನ್ನು ಹೇಳಿದಳು. ರಾಮನು ಈ ಮಾತನ್ನುಕೇಳಿ ಬಹಳ ದುಃಖವನ್ನು ಹೊಂದಿದನು. ಆದರೆ ಅವನು ಉತ್ತರಕೊಟ್ಟದ್ದೇನು ? ಕಾಡಿಗೆ ಹೋಗಲು ತಿರಸ್ಕರಿಸಿದನೇ ? ಇಲ್ಲ. ನೀನು ಹೇಳಿದಂತೆಯೇ ಆಗಲಿ. ಯಾರಮಾತು ನನಗೆ ನಿಯಮವಾಗಿದೆ ಯೋ ಅಂಥಾ ನನ್ನ ತಂದೆಯು ಏಕೆ ಸುಮ್ಮನಿರುವನು ? ಎಂದು ಕೋಪವನ್ನುಮಾಡದೆ ಪ್ರೀತಿಯಿಂದಲೇ ಸಂಪೂರ್ಣವಾದ ವಿಧೇಯತೆ ಯನ್ನು ತೋರಿಸಿದನು. ನಾನು ನನ್ನ ತಾಯಿಯನ್ನು ನೋಡಿ ಸೀತೆ ಯನ್ನು ಸಮಾಧಾನಪಡಿಸಿ ಈ ದಿವಸವೇ ಕಾಡಿಗೆ ಹೊರಡುವೆನೆಂದನು.

ಅವನ ತಾಯಿಯು ಈ ಮಾತನ್ನು ಕೇಳಿ ಕೋಪಾಕ್ರಾಂತಳಾದಳು. ಕಾಡಿಗೆ ಹೋಗಬೇಡವೆಂದು ತಡೆದಳು. ಅವನನ್ನು ಬಿಟ್ಟು ಕೌಸಲ್ಯೆಯು ಇರಲಾರದವಳಾಗಿದ್ದಳು. ಅವನು ತನ್ನ ತಾಯಿಯ ತಿರಸ್ಕಾರವನ್ನು ಕಾಡಿಗೆ ಹೋಗದಿರುವುದಕ್ಕೆ ನೆವವಾಗಿಟ್ಟುಕೊಂಡನೋ? ನಿಜವಾಗಿಯೂ ಇಲ್ಲ. ತನಗೆ ಅಪ್ಪಣೆ ಕೊಡಬೇಕೆಂದು ನಮ್ರತೆಯಿಂದ ಬೇಡಿಕೊಂಡನು. "ನಾನು ನನ್ನ ತಂದೆಯ ಇಷ್ಟಕ್ಕೆ ವಿರೋಧವಾಗಿ ನಡೆಯಬಾರದು." ಎಂದನು.

ಕಡೆಗೆ ಕೌಸಲ್ಯೆಯು "ನೀನು ಹೋಗಬಹುದು. ಆದರೆ ನಾನೂ ನಿನ್ನ ಸಂಗಡಬರುವೆನು." ಎಂದಳು. ಸ್ವಪ್ರಯೋಜನವನ್ನು ಆಲೋಚಿಸುವುದಕ್ಕೆ ಬದಲಾಗಿ ರಾಮನು ತನ್ನ ತಂದೆಯ ವಿಷಯವನ್ನು ಯೋಚಿಸಿ ಅವಳು ಇಲ್ಲಿಯೇ ಇದ್ದು ರಾಜನನ್ನು ಸಮಾಧಾನಪಡಿಸುವಂತೆ ಕೌಸಲ್ಯೆಗೆ ಹೇಳಿದನು. ಆತನ ಪ್ರೀತಿಯೂ, ವಿಧೇಯತೆಯೂ, ಅಧಿಕವಾಗಿರುವುದನ್ನು ನೋಡಿ ಆತನ ತಾಯಿಯು ಅವನಿಗೆ ಆಶೀರ್ವಾದವನ್ನು ಮಾಡಿ ಹೋಗುವುದಕ್ಕೆ ಅಪ್ಪಣೆಯನ್ನು ಕೊಟ್ಟು ಅರಣ್ಯವಾಸದ ಅವಧಿಯು ಪೂರೈಸಿದಬಳಿಕ ತನ್ನ ಬಳಿಗೆ ಬರಬೇಕೆಂದು ಹೇಳಿದಳು. ಈ ರೀತಿಯಾಗಿ ರಾಮನು ತನ್ನ ತಂದೆಯ ಆಜ್ಞೆಯಂತೆ ನಡೆಯುವುದಕ್ಕಾಗಿ ಅರಣ್ಯಕ್ಕೆ ಹೊರಟುಹೋದನು. ಸೀತೆಯೂ, ಲಕ್ಷ್ಮಣನೂ, ಅವನ ಜತೆಯಲ್ಲಿ ಹೊರಟರು. ತನ್ನ ತಂದೆಯ ಇಷ್ಟದಂತೆ ನಡೆಯಲು ರಾಮನು ಬಹಳ ಸಂತೋಷಪಟ್ಟನು.

## ಹಿರಿಯರಲ್ಲಿ ಭಕ್ತಿ.

ವೃದ್ಧರನ್ನು ಗೌರವಿಸಬೇಕು. ಪ್ರತಿಯೊಬ್ಬನೂ ಅವರನ್ನು ನೋಡಿದಾಗ ಅವರಿಗೆ ಕುಳಿತುಕೊಳ್ಳಲು ಆಸನವನ್ನು ಕೊಡಬೇಕು.

ವೃದ್ಧರಾದವರು ಕುಳಿತುಕೊಂಡಮೇಲೆ ಕುಳಿತುಕೊಳ್ಳಬೇಕು. ಒಬ್ಬ ವೃದ್ಧನು ದಾರಿಯಲ್ಲಿ ಹೋಗುತ್ತಿರುವಾಗ ಯೌವನಸ್ಥನು ಅವನಮೇಲೆ ನುಗ್ಗಿಹೋಗುವುದಕ್ಕಿಂತಲೂ ಅವನ ಹಿಂದೆ ಹೋಗುವುದು ಉತ್ತಮವಾದುದು.

ಇವೇ ಪುರಾತನಗುರುಗಳು ಹೇಳಿರುವ ಮಾತುಗಳು. ನೀವು ಹಿರಿಯರನ್ನು ಯಾವರೀತಿಯಲ್ಲಿ ಉಪಚರಿಸಬೇಕೆಂಬ ವಿಷಯದಲ್ಲಿ ಒಂದು ಕಥೆಯನ್ನು ಹೇಳದಿದ್ದರೂ ಪ್ರತಿಯೊಂದು ಕಥೆಯಲ್ಲಿಯೂ ಮಹಾತ್ಮರೂ, ಶೂರರೂ, ಆದವರು ತಮ್ಮ ತಂದೆಗಳ ಮತ್ತು ಸುತ್ತು ಮುತ್ತಲಿರುವ ವೃದ್ಧರ ವಿಷಯದಲ್ಲಿ ಹೇಗೆ ನಡೆಯುತ್ತಿದ್ದರೆಂಬುದನ್ನು ಓದಬಹುದು. ವಿದುರನು ಅರಣ್ಯದಲ್ಲಿದ್ದ ಪಾಂಡವರಬಳಿಗೆ ಹೋದಾಗ ಅವರು ಅವನನ್ನು ನೋಡಿದಕೂಡಲೆ ಎಲ್ಲರೂ ಎದ್ದು ನಿಂತುಕೊಂಡರೆಂದು ಹೇಳಿಲ್ಲವೇ ?

ದೊಡ್ಡಗುರುವಾದ ಮನುವು "ಯಾವನು ವೃದ್ಧರಿಗೆ ನಮಸ್ಕಾರಮಾಡಿ ಗೌರವವನ್ನು ಕೊಡುವನೋ ಅವನುದೀರ್ಘಾಯಸ್ಸು, ಜ್ಞಾನ, ಕೀರ್ತಿ, ಬಲ, ಎಂಬ ನಾಲ್ಕುವಸ್ತುಗಳನ್ನು ಅತ್ಯಧಿಕವಾಗಿ ಪಡೆಯುವನು." ಎಂದು ಹೇಳಿರುವನು.

---

## ನಮ್ರತೆ. (Humility)

ಮಹಾರಾಜನಾದ ಯುಧಿಷ್ಟಿರನು ಒಂದುವೇಳೆ ಒಂದು ದೊಡ್ಡಯಜ್ಞವನ್ನು ಮಾಡಲು ಅಪೇಕ್ಷಿಸಿದನು. ಆಗ ಅವನ ಸ್ನೇಹಿತರೂ, ಮಂತ್ರಿಗಳೂ, ಮತ್ತು ಅಧಿಕಾರಿಗಳೂ, ಬಂದು ಅಲ್ಲಿ ನಡೆಯಬೇಕಾದ ಕ್ರಮಗಳ ವಿಚಾರವಾಗಿ ಮಾತನಾಡುವುದಕ್ಕೆ ಪ್ರಾರಂಭಿಸಿದರು. ಆ

ವರು ಮಾತನಾಡುತ್ತಿರುವಾಗ ಸಕಲ ವಸ್ತುಗಳಿಗೂ ಸ್ವಾಮಿಯಾದ ಶ್ರೀಕೃಷ್ಣನೇ ಅಲ್ಲಿಗೆ ಬಂದನು. ಯುಧಿಷ್ಟಿರನು ಬಹಳ ಸಂತೋಷದಿಂದಲೂ, ಗೌರವದಿಂದಲೂ, ಅವನನ್ನು ಬರಮಾಡಿಕೊಂಡನು. ಪಟ್ಟಣವೇ ಅವನ ಆಗಮನದಿಂದ ಸಂತೋಷಪಟ್ಟಿತು. ಯುಧಿಷ್ಟಿರನು ಈ ಮಹಾಯಜ್ಞವನ್ನು ಮಾಡುವುದಕ್ಕೆ ಅಪ್ಪಣೆಯನ್ನು ಕೊಡಬೇಕೆಂದು ಶ್ರೀಕೃಷ್ಣನನ್ನು ಕೇಳಿಕೊಂಡನು. ಶ್ರೀಕೃಷ್ಣನು ಅವನಿಗೆ ಅನುಜ್ಞೆಯನ್ನುಕೊಟ್ಟು "ಇದು ಒಳ್ಳೆಯದು. ಆದುದರಿಂದ ಇದನ್ನು ನೀನು ಮಾಡು." ಎಂದು ನುಡಿದನು.

ಆಮೇಲೆ ದೇಶದ ಎಲ್ಲಾ ಬ್ರಾಹ್ಮಣರನ್ನೂ, ಕ್ಷತ್ರಿಯರನ್ನೂ, ವೈಶ್ಯರನ್ನೂ, ಮತ್ತು ಗೌರವವನ್ನುಹೊಂದಿದ ಶೂದ್ರರನ್ನೂ, ಕರೆಯುವುದಕ್ಕಾಗಿ ಸೇವಕರನ್ನು ಕಳುಹಿಸಿದನು. ಅನೇಕ ಸಹಸ್ರಬ್ರಾಹ್ಮಣರು ಬಹಳ ಸಂತೋಷದಿಂದ ನಾನಾದೇಶಗಳಿಂದಲೂ ಹೊರಟು ಯಜ್ಞಕ್ಕೋಸ್ಕರ ಯುಧಿಷ್ಟಿರನ ರಾಜಧಾನಿಗೆ ಬಂದು ಸೇರಿದರು. ಆ ಮಹಾಸಭೆಯಲ್ಲಿ ಶ್ರೀಕೃಷ್ಣನಂತೆ ಯಾರೂ ಇರಲಿಲ್ಲ.

ಸರ್ವ ಪ್ರಾಣಿಗಳಿಗೂ ಒಡೆಯನಾದ ಮತ್ತು ಮಾನವರೆಲ್ಲರಲ್ಲಿಯೂ ಶ್ರೇಷ್ಠನಾದ ಶ್ರೀಕೃಷ್ಣನು ನಮ್ರತೆಯಿಂದ ತನ್ನ ಮಾಹಾತ್ಮ್ಯವನ್ನು ತೋರ್ಪಡಿಸಿದನು. ಶ್ರೀಕೃಷ್ಣನು ತಾನೇ ಬ್ರಾಹ್ಮಣರ ಪಾದಗಳನ್ನು ತೊಳೆದನು. ಇಲ್ಲಿ ನಾವು ಎಂತಹ ಪಾಠಗಳನ್ನು ಕಲಿಯಬಹುದು? ಎಲ್ಲರಿಗಿಂತಲೂ ಅತ್ಯುತ್ತಮನಾದ ಶ್ರೀಕೃಷ್ಣನು ನಮ್ರತೆಯಿಂದ ಕೂಲಿದ ಸೇವಕನಾಗಿರುತ್ತಾನೆ. ಇದರಿಂದ ಯಾವ ಸೇವೆಯನ್ನಾದರೂ ಎಂದಿಗೂ ದೂಷಿಸಬಾರದೆಂಬುದನ್ನು ತಿಳಿಯಬಹುದು.

ಚಿಕ್ಕಮಕ್ಕಳು ಇತರರ ಸೇವೆಯೇ ಅತ್ಯುತ್ತಮವಾದ ಧರ್ಮವೆಂದೂ, ಯಾವಾಗಲೂ ಅಹಂಕಾರವಿಲ್ಲದೆ ಇರಬೇಕೆಂದೂ, ಜ್ಞಾಪಕದಲ್ಲಿಡಲಿ.

## ವಿರೋಧದಿಂದುಂಟಾಗುವ ಕೆಡುಕು.

ಒಂದಾನೊಂದು ಕಾಲದಲ್ಲಿ ಒಬ್ಬ ಹಕ್ಕಿಯಬೇಟೆಗಾರನು ಹಕ್ಕಿಗಳನ್ನು ಹಿಡಿಯುವುದಕ್ಕಾಗಿ ನೆಲದಮೇಲೆ ಬಲೆಯನ್ನು ಹರಡಿದನು. ಒಟ್ಟಿಗೆ ವಾಸಮಾಡುತಿದ್ದ ಎರಡು ಹಕ್ಕಿಗಳು ಆ ಬಲೆಗೆ ಬಿದ್ದುವು. ಆಗ ಆ ಎರಡು ಹಕ್ಕಿಗಳೂ ತಮ್ಮ ಕೊಕ್ಕುಗಳಿಂದ ಆ ಬಲೆಯನ್ನು ಕಚ್ಚಿಕೊಂಡು ಆಕಾಶಮಾರ್ಗವಾಗಿ ಹಾರಿಹೋಗುತಿದ್ದುವು.

ಬೇಟೆಗಾರನು ಹಕ್ಕಿಗಳನ್ನು ಹಿಂಬಾಲಿಸಿ ಓಡುತ್ತಿರಲು, ಹತ್ತಿರದಲ್ಲಿದ್ದ ಒಂದು ಆಶ್ರಮದಲ್ಲಿ ವಾಸಮಾಡುತಿದ್ದ ಋಷಿಯು ಇವನನ್ನು ನೋಡಿ ''ಎಲೈ ಬೇಡನೇ, ನಿನಗೆ ನೆಲದಮೇಲೆ ಮಾತ್ರ ಓಡುವುದಕ್ಕೆ ಶಕ್ತಿಯಿರುವುದು. ಇಂತಹ ನೀನು ಆಕಾಶಮಾರ್ಗದಲ್ಲಿ ಸಂಚರಿಸುವ ಹಕ್ಕಿಗಳನ್ನು ಹಿಂಬಾಲಿಸುತ್ತಿರುವೆ. ಇದು ನನಗೆ ಆಶ್ಚರ್ಯವಾಗಿ ಕಾಣುವುದು'' ಎಂದನು. ಅದಕ್ಕೆ ಬೇಡನು ಎಲೈ ಮಹಾತ್ಮನೆ! ''ಈ ಹಕ್ಕಿಗಳೆರಡೂ ಒಟ್ಟಿಗಿದ್ದು ಕೆಲಸಮಾಡುವವರೆಗೂ ಅವು ಬಲೆಯನ್ನು ಎತ್ತಿಕೊಂಡು ಹಾರಬಲ್ಲವು. ಆದರೆ ಅವು ಒಂದರಸಂಗಡ ಒಂದು ಜಗಳಮಾಡಿದರೆ ಬಲೆಯನ್ನು ಬಿಟ್ಟುಬಿಡುವುವು. ಆಗ ಬಲೆಯು ನೆಲದಮೇಲೆ ಬೀಳುವುದು. ಹಕ್ಕಿಗಳು ನನ್ನ ಕೈಗೆ ಸಿಕ್ಕುವುವು.'' ಎಂದು ಹೇಳಿದನು. ಹಾಗೆಯೇ ಸಂಭವಿಸಿತು. ಆ ಬುದ್ಧಿಯಿಲ್ಲದ ಹಕ್ಕಿಗಳು ಜಗಳವಾಡಲು ಪ್ರಾರಂಭಿಸಿದುವು. ಈ ಜಗಳದಲ್ಲಿ ಎರಡೂ ಬಲೆಯನ್ನು ಬಿಟ್ಟುಬಿಟ್ಟವು. ಬಲೆಯು ಹಕ್ಕಿಗಳೊಡನೆ ನೆಲದಮೇಲೆ ಬಿದ್ದಿತು. ಬೇಡನು ಓಡಿಬಂದು ಅವುಗಳನ್ನು ಹಿಡಿದು ಕೊಂದುಹಾಕಿದನು.

ಒಂದು ಸಂಸಾರದಲ್ಲಿಯೂ ಇದೇರೀತಿಯಾಗಿರುತ್ತದೆ. ಎಲ್ಲರೂ ಕರುಣೆಯಿಂದಲೂ, ಪ್ರೀತಿಯಿಂದಲೂ, ಒಟ್ಟಿಗೆ ಕೆಲಸಮಾಡುತ್ತಿರುವವರೆಗೂ ಎಲ್ಲಾ ಚನ್ನಾಗಿಯೇ ನಡೆಯುತ್ತದೆ. ಬಂಧುವರ್ಗದವರು

ಜಗಳವಾಡುವುದಕ್ಕೂ, ನಿರ್ದಯೆಯನ್ನು ತೋರಿಸುವುದಕ್ಕೂ, ಪ್ರಾರಂಭಿಸಿದಾಗ ಪಕ್ಷಿಗಳಂತೆಯೇ ಶತ್ರುವಿನ ಕೈಗೆ ಸಿಕ್ಕಿಬೀಳುವರು. ಸಂಸಾರದಲ್ಲಿ ವ್ಯಸನವೂ ಪ್ರಾಪ್ತವಾಗುವುದು.

ಶಕ್ತಿಯನೀಯುತೆ ದೇವಂ |
ತಕ್ಕಂತೀಜನರನೆಲ್ಲರಂ ಪೊರೆಯುತಿಹಂ ||
ಮಿಕ್ಕಿರೆ ಶಕ್ತಿಯು ಸುಮತಿಗೆ |
ತಕ್ಕಂತಿರುವೆನ್ನ ಶಕ್ತಿ ಪಿರಿದೆನಗಕ್ಕುಂ ||

ಕಿರಿಯವನಾವನುಮಿಲ್ಲಂ |
ಪಿರಿಯವನವನೊರ್ವನಧಿಕ ಕಾರ್ಯಮನೆಸಗಲ್ ||
ಕಿರಿದಾದ ಶಕ್ತಿಯಿಂ ನಾ |
ನರುಫಲಮಂ ಪಡೆವೆಸತತಮೆಚ್ಚರದಿಂದಂ ||

---

## ಮಹಾಭಾರತ.

ಮಹಾಭಾರತದಲ್ಲಿ ಕಾಣಬಹುದಾದ ಅನೇಕ ಕಥೆಗಳನ್ನು ನೀವು ಈ ಪುಸ್ತಕದಲ್ಲಿ ಓದಿದಿರಿ. ಈಗ ಆ ಪುಸ್ತಕದ ವಿಷಯವಾಗಿಯೇ ಕೆಲವು ಮಾತುಗಳನ್ನು ನಿಮಗೆ ಹೇಳುತ್ತೇನೆ.

ವ್ಯಾಸಮಹರ್ಷಿಗಳು ವೇದಗಳನ್ನು ಅಭ್ಯಾಸಮಾಡುವುದರಲ್ಲಿ ಅನೇಕ ವರ್ಷಗಳನ್ನು ಕಳೆದರು. ಅವರು ಧ್ಯಾನದಿಂದಲೂ, ತಪಸ್ಸಿನಿಂದಲೂ, ನಾರದರ ದೇವಯೋಗ್ಯವಾದ ಗಾನವನ್ನು ಕೇಳುತ್ತಿದ್ದರು. ತಿಳಿಯಬೇಕೆಂದು ಇಷ್ಟಪಡುವ ಜನರಿಗೆ ಅವರು ಕೊಡುವ ತತ್ವಜ್ಞಾನವನ್ನು ಈ ವ್ಯಾಸರು ಕಲಿತರು. ಇತರರಿಗೆ ಉಪಕಾರಮಾಡುವುದಕ್ಕಾ

ಗಿಯೇ ತಮಗೆ ತತ್ವಜ್ಞಾನವು ಬರುವುದೆಂದು ತಿಳಿದು ವ್ಯಾಸರು ತಮ್ಮ ಶಿಷ್ಯರಿಗೆ ಹೇಳಿಕೊಡಬೇಕೆಂದು ಅಪೇಕ್ಷಿಸಿದರು. ಒಂದಾನೊಂದುದಿವಸ ಅವರು ಜನಗಳಿಗೆಬೋಧೆಮಾಡುತ್ತ ಸತ್ಪುರುಷರೊಡನೆ ಮಾತನಾಡುತ್ತ ಕುಳಿತಿದ್ದಕಾಲದಲ್ಲಿ ಬ್ರಹ್ಮದೇವನು ಅಲ್ಲಿಗೆ ಬಂದನು. ವ್ಯಾಸರು ಬಹಳ ಸಂತೋಷದೊಡನೆ ಎದ್ದುನಿಂತು ಮಹಾತ್ಮನಾದ ಆಬ್ರಹ್ಮನಿಗೆ ನಮಸ್ಕಾರವಮಾಡಿದರು. ಬ್ರಹ್ಮನು ಬಂದು ಆಸನದಲ್ಲಿ ಕುಳಿತುಕೊಂಡು ವ್ಯಾಸರನ್ನೂ,ತನ್ನ ಸಮೀಪದಲ್ಲಿ ಕುಳಿತುಕೊಳ್ಳುವಂತೆ ಹೇಳಲು, ಅವರು ಸಂತೋಷದಿಂದಲೂ,ಪ್ರೀತಿಯಿಂದಲೂ, ಕೂಡಿದ ಮನಸ್ಸಿನಿಂದ ಹಾಗೆಯೇ ಮಾಡಿದರು. ವ್ಯಾಸರು ತಮ್ಮ ಮನಸ್ಸಿನಲ್ಲಿದ್ದ ದೊಡ್ಡಗ್ರಂಥದ ವಿಷಯವನ್ನು ಆಗ ಹೇಳಿದರು. ಈ ಗ್ರಂಥವು ಮನುಷ್ಯನು ತಿಳಿಯುವುದಕ್ಕೆ ಸರಿಯಾದ ಎಲ್ಲಾ ವಿಷಯಗಳನ್ನೂ ತಿಳಿಸುವುದು. ವರ್ಣಗಳನ್ನೂ ಅವುಗಳ ಕರ್ತವ್ಯಗಳನ್ನೂ, ಜನನ ಮರಣಾದಿಗಳ ವಿಷಯವನ್ನೂ, ಶಾಸ್ತ್ರ ಮತ್ತು ಮತಗಳ ವಿಷಯಗಳನ್ನೂ, ತಿಳಿಸುತ್ತದೆ. ಎಂಬುದನ್ನು ತಿಳಿಸಿದನು. ನಾನು ಅದನ್ನು ಹೇಳಲು ಶಕ್ತಿಯುಳ್ಳವನಾದರೂ ಅದನ್ನೆಲ್ಲ ಬರೆಯುವುದಕ್ಕೆ ಶಕ್ತನಾದ ಲೇಖಕನು ಸಿಕ್ಕಲಿಲ್ಲವೆಂದು ಹೇಳಲು ಬ್ರಹ್ಮನು ನೀನು ಹೇಳಬೇಕೆಂದಿರುವ ಗ್ರಂಥವು ಬಹಳ ಶ್ರೇಷ್ಠವಾದುದು. ನೀನು ಕೆಲವುಕಾಲ ಭಕ್ತಿಯಿಂದ ಗಣೇಶನನ್ನು ಧ್ಯಾನಿಸಿದರೆ ಆ ದೇವನುಬಂದು ನಿನ್ನ ಇಷ್ಟವನ್ನು ನೆರವೇರಿಸುವನು. ಈ ಗ್ರಂಥವನ್ನು ಬರೆಯುವುದಕ್ಕೆ ಅವನೇ ಶಕ್ತನು. ಎಂದುಹೇಳಿ ಬ್ರಹ್ಮನು ಹೊರಟುಹೋದನು. ವ್ಯಾಸನು ಗಣೇಶನನ್ನು ಧ್ಯಾನಿಸಿದನು. ಭಕ್ತಿಯಿಂದ ಕೂಡಿದ ಆ ಧ್ಯಾನವು ಆ ಮಹಾತ್ಮನಾದ ಗಣೇಶದೇವನನ್ನು ತನ್ನೆದುರಿಗೆ ಬರುವಂತೆ ಮಾಡಿತು. ವ್ಯಾಸರು ಅವನಿಗೆ ನಮಸ್ಕರಿಸಿ “ ಓ ಮಹಾತ್ಮನಾದ ಗಣೇಶನೇ, ಪ್ರಪಂಚದ ಉಪಕಾರಕ್ಕಾಗಿ ನನಗೆ ಬಂದಿರುವ ಈ ಗ್ರಂಥವನ್ನು ನೀನು ದಯೆಯಿಟ್ಟು ಬರೆಯಬೇಕು. ಎಂದು ಪ್ರಾರ್ಥಿಸುತ್ತೇ

ನೆ.'' ಎಂದನು. ಗಣೇಶನು ವ್ಯಾಸನು ಹೇಳಿದಂತೆಯೇ ಭಾರತವನ್ನು ಬರೆದನು. ಅದರಿಂದಲೇ ಮತ ಮತ್ತು ನೀತಿಯ ವಿಷಯಗಳನ್ನು ಈ ಪುಸ್ತಕದಲ್ಲಿ ನಾವು ಕಲಿಯುತ್ತೇವೆ. ಈ ಮಹಾ ಭಾರತದಲ್ಲಿ ಬಹಳ ಪೂರ್ವಕಾಲದಲ್ಲಿದ್ದ ಮಹಾತ್ಮರ ಮತ್ತು ಒಳ್ಳೆಯವರ ಕಥೆಗಳನ್ನು ಓದಬಲ್ಲೆವು.

ಮಕ್ಕಳಿರಾ,

ಈಗ ನಾನು ಹೇಳಿದ ಕಥೆಗಳಲ್ಲೆಲ್ಲ ಪೂರ್ವದ ಮಹರ್ಷಿಯರಲ್ಲಿ ಯಾವ ಯಾವ ಸುಗುಣಗಳಿತ್ತೆಂಬುದನ್ನೂ ಮತ್ತು ನೀವು ಅಂತಹ ಸುಗುಣಗಳನ್ನು ಹೇಗೆ ಅಭ್ಯಾಸಮಾಡಬೇಕೆಂಬುದನ್ನೂ, ಗ್ರಹಿಸಿರುವಿರಿ. ನೀವುಗಳೆಲ್ಲರೂ ಸನ್ಮಾರ್ಗದಲ್ಲಿ ಪ್ರವರ್ತಿಸಿ ನಿಮ್ಮ ತಂದೆತಾಯಿಗಳಿಗೂ, ವಂಶಕ್ಕೂ, ದೇಶಕ್ಕೂ, ಯಶಸ್ಸನ್ನು ತರುವಿರೆಂದು ನಂಬಿರುವೆನು. ನೀವು ಅಭ್ಯಾಸಮಾಡಬೇಕಾದ ಸುಗುಣಗಳು ಇನ್ನೂ ಅನೇಕವಾಗಿರುವುವು. ಅವುಗಳನ್ನು ಪ್ರತ್ಯೇಕವಾಗಿ ಹೇಳುವೆನು.

ಒಂದನೇಭಾಗ ಸಂಪೂರ್ಣಂ.

**Peace be to all!**



ಕ್ಲಾರ್ಕ್ ಪ್ರೆಸ್, ಮೈಸೂರು—೧೯೧೧.

## ಮತ ಮತ್ತು ನೀತಿಬೋಧೆಯ ಪುಸ್ತಕಗಳು.



| | | |
|---|---|---|
| ಆರ್ಯಬಾಲನೀತಿ 1 ನೆ ಭಾಗ | (ಕೆ. ಮಾಧವರಾಯರಿಂದ) | 0-4-0 |
| ಡಿಟ್ಟೊ 2 ನೆ ಭಾಗ | ,, (In the Press) | |
| ಧರ್ಮನೀತಿಬೋಧೆ 1 ನೆ ಭಾಗ | (ವೆಂಕಣ್ಣಭಟ್ಟರಿಂದ) | 0-1-6 |
| ಆರ್ಯಧರ್ಮ | (ಕೆ. ನರಹರಿಶಾಸ್ತ್ರಿಗಳಿಂದ) | 0-1-6 |
| ಸಾವಿತ್ರಿಹಾಡು | ,, | 0-1-0 |
| ಸನಾತನಧರ್ಮ ಪ್ರಶ್ನೋತ್ತರಮಾಲೆ | (ಎಂ. ಕೃಷ್ಣಯ್ಯ) | 0-0-9 |
| ಸನಾತನಧರ್ಮ ಕಥೆಗಳು | ,, | 0-1-6 |
| ಸನಾತನಧರ್ಮಸಂಗ್ರಹ. | (ವಾಸುದೇವಮೂರ್ತಿ) | 0-1-6 |

ಈ ಪುಸ್ತಕಗಳು ಆಯಾಯ ಗ್ರಂಥಕರ್ತರಲ್ಲಿಯೂ ಮತ್ತು ಮೈಸೂರು ಥಿಯಸಾಫಿಕಲ್ ಸೊಸೈಟಿ ಸೆಕ್ರೆಟರಿಯವರಲ್ಲಿಯೂ ದೊರೆಯುತ್ತವೆ.

